


ಸೆಪ್ಟಂಬರ್, 1995

# ಸಪ್ತಗಿರಿ

ಬೆಲೆ : ರೂ. 2/-

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



ವೆಂಕಟೇಶ ಬೇಡಿಕೊಂಡೆ ಕೃಪೆಯ ಪಾಲಿಸೊ ಬ್ರಹ್ಮ
ಶಂಕರಾದಿ ವಂದ್ಯ ಎನಗೆ ಮುಕ್ತಿ ತೋರಿಸೊ

ನಷ್ಟ ಮೊದಲಾದಂಥ ಕಷ್ಟ ಬಿಡಿಸೊ ನಿನ್ನ
ಪಟ್ಟದ ರಾಣಿಗೆ ಹೇಳಿ ಪದವಿ ಕೊಡಿಸೊ
ಇಷ್ಟ ಭಕ್ತ ಜನರೊಳು ಎನ್ನ ಸೇರಿಸೊ
ಈ ಸೃಷ್ಟಿಯೊಳು ನಿನ್ನ ದಾಸರ ದಾಸನೆನಿಸೊ -೧-

ಉಟ್ಟು ಉಂಡು ಮಿಕ್ಕಿದ್ದೆಲ್ಲ ಎನಗೆ ಹಾಕಿಸೊ ಪೊಂ
ಬಟ್ಟ ಲೊಳಗಿನ ಹಾಲು ಉಚ್ಛಿಷ್ಟ ಹಾಕಿಸೊ
ಘಟ್ಟ್ಯಾಗಿ ಸಕ್ಕರೆ ತುಪ್ಪರೊಟ್ಟಿ ಉಣಿಸೊ ಮುಂದೆ
ಹುಟ್ಟಿ ಬಹಜನ್ಮಗಳ ಎನಗೆ ಬಿಡಿಸೊ -೨-

ಕಿಟ್ಟಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೊ ಉ
ತ್ಕೃಷ್ಟ ಬಂಗಾರದೊಳು ಎನ್ನ ಸೇರಿಸೊ
ದೆಟ್ಟಿಗೆ ಉಂಗುರ ಮಾಡಿ ಎನ್ನ ಧರಿಸೊ ಸ್ವಾಮಿ
ದಿಟ್ಟ ಪುರಂದರ ವಿಠಲನೆ ದಯದಿ ಪಾಲಿಸೊ -೩-

--ಶ್ರೀ ಪುರಂದರ ದಾಸರು.

# ಮಂಗಳಾಶಾಸನ



'ವೆಂಕಟೇಶ ಸಮೋದೇವೊ ನಭೂತೋ ನಭವಿಷ್ಯತಿ' ಎಂಬುದು ಪುರಾಣ ವಚನ. ಶ್ರೀ ವೆಂಕಟಾಚಲಪತಿಗೆ ಸಮನಾದ ದೈವ ಈ ಹಿಂದೆ ಅವತರಿಸಲಿಲ್ಲ ಹಾಗೂ ಮುಂದೆ ಅವತರಿಸುವುದೂ ಇಲ್ಲ ಎಂಬುದು ಭಾವ.

ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿಗಳು ನಾವು ಬಯಸಿದುದನ್ನೆಲ್ಲ ನೀಡುವಂತಹ ಸ್ವಭಾವ ಹೊಂದಿದವೇ. ಆದರೆ ಶ್ರೀ ವೆಂಕಟಾಚಲಪತಿಯಾದರೊ, ಭಕ್ತರು ಬಯಸಿದುದನ್ನೆಲ್ಲ ಕೊಡುವುದೇ ಅಲ್ಲದೆ, ತನ್ನನ್ನು ಕೂಡ (ಭಕ್ತಾನುಭವಕ್ಕಾಗಿ) ನೀಡಿಕೊಳ್ಳುತ್ತಾನೆ. ಹೀಗಾಗಿಯೇ ಶ್ರೀ ವೆಂಕಟೇಶ ಸುಪ್ರಭಾತಾದಿ ಸ್ತೋತ್ರಗಳನ್ನು ಅನುಗ್ರಹಿಸಿದ ಶ್ರೀ ಪ್ರತಿವಾದಿ ಭಯಂಕರ ಅಣ್ಣನ್ ಅವರು--

ವಿನಾ ವೇಂಕಟೇಶಂ ನನಾಥೋ ನ ನಾಥಃ ಸದಾ ವೇಂಕಟೇಶಂ ಸ್ಮರಾಮಿ ಸ್ಮರಾಮಿ

ಹರೇ ವೇಂಕಟೇಶ ಪ್ರಸೀದ ಪ್ರಸೀದ ಪ್ರಿಯಂ ವೇಂಕಟೇಶ ಪ್ರಯಚ್ಛ ಪ್ರಯಚ್ಛ

–ಎಂದು ಪ್ರಾರ್ಥಿಸಿದರು. ಶ್ರೀ ವೆಂಕಟೇಶ್ವರಸ್ವಾಮಿಯ ಹೊರತು ಬೇರೊಬ್ಬ ನಾಥ ಇಲ್ಲ, ಇಲ್ಲ. ಎಲ್ಲ ಕಾಲದಲ್ಲೂ ವೆಂಕಟೇಶ್ವರನನ್ನು ಸ್ಮರಿಸುತ್ತಿರಬೇಕು. 'ಹರಿಃ ಹರತಿ ಪಾಪಾನಿ' ಎಂಬಂತೆ ಪಾಪಗಳನ್ನು ನಾಶಮಾಡುವ ಶ್ರೀ ವೆಂಕಟೇಶ್ವರಾ! ನನ್ನನ್ನು ಅನುಗ್ರಹಿಸು, ಅನುಗ್ರಹಿಸು, ಸಿರಿಯನ್ನುಂಟಾಗಿಸುವ ವೆಂಕಟೇಶ್ವರಾ ! ನನಗೆ ಪ್ರಿಯವಾದದ್ದನ್ನು (ನಿನ್ನನ್ನು, ನಿನ್ನ ಸೇವೆಯನ್ನು) ನೀಡಿ ದಯೆತೋರು -- ಎಂದು ಶ್ಲೋಕಭಾವ.

ಸಕಲ ಲೋಕಗಳಿಗೂ ತಿಲಕನಾದಂತಹ, ಬೆಟ್ಟದೊಡೆಯನ ಕೀರ್ತಿಯನ್ನು ತಕ್ಕ ರೀತಿಯಲ್ಲಿ ಪಸರಿಸಲು ತಿರುಮಲ ತಿರುಪತಿ ದೇವಸ್ಥಾನದವರು ಕಳೆದ ಇಪ್ಪತ್ತೈದು ವರ್ಷಗಳಿಂದ ಸಪ್ತಗಿರಿ - ಆಧ್ಯಾತ್ಮಿಕ ವಿಷಯ ಪ್ರಧಾನವಾದ ಮಾಸಪತ್ರಿಕೆಯನ್ನು ಪ್ರಕಟಿಸುತ್ತಿದ್ದಾರೆ.

ಹಲವು ಪಂಡಿತರ ಲೇಖನಗಳನ್ನು ಹೊಂದಿ ಪ್ರಕಟವಾಗುತ್ತಿರುವ ಈ ಭಾದ್ರಪದ ಮಾಸದ ಸಪ್ತಗಿರಿ ವಿಶೇಷಸಂಚಿಕೆ ಪಾಠಕರ ಚಿತ್ತದಲ್ಲಿ ಭಕ್ತಿಯನ್ನು ಬೆಳೆಸಿ, ಅವರು ತಿರುಮಲೆಗೆ ಬಂದು ಕುಲಶೇಖರಪ್ಪಡಿಯ ಹೊಸಿಲಲ್ಲಿ ಅಹಂಕಾರ ಮಮಕಾರಗಳನ್ನು ತೊರೆದು ಅಚೇತನದಂತೆ ಇದ್ದು, ಶ್ರೀಸ್ವಾಮಿ ತೊಂಡೆಹಣ್ಣಿನಂತಹ ತುಟಿಗಳ ಸೌಂದರ್ಯವನ್ನು ಸೇವಿಸುವ ಮಾರ್ಗದರ್ಶಿಯಾಗುವುದೆನ್ನುವುದರಲ್ಲಿ ಸಂದೇಹವಿಲ್ಲ.

ನಿತ್ಯಶ್ರೀಃ ನಿತ್ಯ ಮಂಗಳಂ

**--ಶ್ರೀ ವೆಂಕಟೇಶ (ಪೆದ್ದಜೀಯರ್ ಸ್ವಾಮಿಗಳು)**



ಮಾಯಾವೀ ಪರಮಾನಂದಂ ತ್ಯಕ್ತ್ವಾ ವೈಕುಂಠ ಮುತ್ತಮಮ್

ಸ್ವಾಮಿ ಪುಷ್ಕರಿಣೀ ತೀರೇ ರಮಯಾ ಸಹ ಮೋದತೇ

–ಎಂಬುದು ಪುರಾಣಶ್ಲೋಕ. ಆಶ್ಚರ್ಯಕರ ಶಕ್ತಿಯುಕ್ತನಾದ ಶ್ರೀಮನ್ನಾರಾಯಣನು ಮಹಾನಂದದಾಯಿನಿಯಾದ ಉತ್ತಮವಾದ ಪರಮಪದವನ್ನು - ಶ್ರೀ ವೈಕುಂಠವನ್ನು - ಬಿಟ್ಟು ನಾವು ಉಜ್ಜೀವಿಸಲೆಂದು ತಿರುಮಲೆಯ ಸ್ವಾಮಿ ಪುಷ್ಕರಿಣೀ ತೀರದಲ್ಲಿ ಮಹಾಲಕ್ಷ್ಮಿಯೊಡನೆ ವಿಹರಿಸುತ್ತಿದ್ದಾನೆ - ಎಂದು ಶ್ಲೋಕಭಾವ.

ಇಂತಹ ವೆಂಕಟೇಶ್ವರನು ಮಹಾವಿಷ್ಣುವೇ ಎಂಬುದನ್ನು ಸ್ಥಾಪಿಸಿ, ಇನ್ನು ಯಾರಿಗೂ ಎಂತಹ ಸಂದೇಹಗಳೂ ಉಂಟಾಗದಿರುವಂತೆ ಆ ದೇವನ ಶ್ರೀಕರಗಳಲ್ಲಿ ಸುವರ್ಣಮಯ ಶಂಖ, ಚಕ್ರಗಳನ್ನು ಧರಿಸುವಂತೆ ಶ್ರೀ ಭಗವದ್ರಾಮಾನುಜರು ಮಾಡಿದರೆಂಬುದು ಲೋಕಪ್ರಸಿದ್ಧ. ಅಂತಹ ಅಸ್ಮತ್ಸ್ವಾಮಿಯಾದ ಶ್ರೀ ರಾಮಾನುಜರ ಆಜ್ಞೆಯ ಪ್ರಕಾರವಾಗಿಯೇ ತಿರುಮಲೆ ಬೆಟ್ಟದ ಮೇಲೆ ಎಲ್ಲ ಕೈಂಕರ್ಯಗಳೂ ಇಂದಿಗೂ ನಡೆಯುತ್ತ ಬಂದಿವೆ.

ಇಂತಹ ಮಹಿಮೋನ್ನತನಾದ ಶ್ರೀ ವೆಂಕಟಾಚಲಾಧಿಪತಿಯ ಸ್ವರೂಪ ರೂಪಗುಣಗಳನ್ನು ಹಲವಾರು ವಿದ್ವಾಂಸರ ಲೇಖಗಳ ಮೂಲಕ ತಿರುಮಲೆ ತಿರುಪತಿ ದೇವಸ್ಥಾನಗಳ "ಸಪ್ತಗಿರಿ" ಮಾಸಪತ್ರಿಕೆ ಪ್ರಚಾರ ಮಾಡುತ್ತಿರುವುದು ಎಲ್ಲರೂ ತಿಳಿದ ವಿಷಯವೇ ಆಗಿದೆ.

ಈ ಭಾದ್ರಪದಮಾಸ ಬ್ರಹ್ಮೋತ್ಸವವನ್ನು ಪುರಸ್ಕರಿಸುತ್ತ ಇಪ್ಪತ್ತಾರನೆಯ ಸಂವತ್ಸರಾರಂಭದಲ್ಲಿ ಸಪ್ತಗಿರಿ ಪತ್ರಿಕೆ ವಿಶೇಷ ಸಂಚಿಕೆಯಾಗಿ ಪ್ರಸಾರವಾಗಿ, ಹಲವಾರು ವಿದ್ವಾಂಸರ ಲೇಖನಗಳ ಮೂಲಕ ಶ್ರೀ ವೆಂಕಟೇಶ್ವರಸ್ವಾಮಿ ಮಹಿಮೆಗಳನ್ನು ಪ್ರಪಂಚಕ್ಕೆ ತಿಳಿಯಪಡಿಸುತ್ತಿರುವುದು ಮಹತ್ತಾದ ಸತ್ಕಾರ್ಯ. ಈ ಮಾಸಪತ್ರಿಕೆ ಇತೋಧಿಕವಾಗಿ ವೃದ್ಧಿಪಡೆಯಲೆಂದು ಶ್ರೀನಿವಾಸನ ಪುಷ್ಪಭರಿತ ನೂಪುರ ವಿಭೂಷಿತವಾದ ಶ್ರೀಚರಣಗಳಲ್ಲಿ ನನ್ನ ಪ್ರಾರ್ಥನೆ.

ನಿತ್ಯಶ್ರೀಃ ನಿತ್ಯ ಮಂಗಳಂ

**--ಶ್ರೀರಂಗರಾಮಾನುಜ ಚಿನ್ನ ಜೆಯ್ಯಂಗಾರ್**

--ಶ್ರೀ ಚಿನ್ನ ಜೆಯಂಗಾರ್ ಮಠ, ತಿರುಪತಿ.



**ಸಂಪುಟ -- 26 ಸೆಪ್ಟಂಬರ್ 1995 ಸಂಚಿಕೆ -- 4**

# ವಿಷಯಸೂಚಿ



ಮುಖ ಚಿತ್ರ : ಆನಂದ ನಿಲಯ ವಿಮಾನದಲ್ಲಿ ಶ್ರೀನಿವಾಸ.

ಹಿಂಬದಿಯಲ್ಲಿ : ಮೈಸೂರು ಶ್ರೀ ಚಾಮುಂಡೇಶ್ವರೀ ಅಮ್ಮನವರು,
ಚಿತ್ರ - ಪಿ. ಶಿವಶಂಕರ್.

ಒಳಗಡೆ : 1) ಸರಸ್ವತಿ - ಚಿತ್ರ - ದತ್ತು.
2) ಲಕ್ಷ್ಮಿ - ಚಿತ್ರ - ಬಾಬುನಾಥ್.


ಗೌರವ ಸಂಪಾದಕರು :
ಶ್ರೀ ಎಸ್. ರಮೇಶ್‌ಕುಮಾರ್, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
ಎನ್.ಎಸ್. ರಾಮಮೂರ್ತಿ, ಎಂ. ಎ.

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ. ಎ.,

ಮುದ್ರಣ :
ಪಿ. ಮೋಹನ್‌ರಾವ್

ಲೇಖನ/ಜಾಹೀರಾತುಗಳಿಗೆ
ಮಿಕ್ಕವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. --ಸಂ||




ಭಗವಂತ ಲೀಲಾ ಮಾನುಷ ವಿಗ್ರಹ. ಭಗವಂತನ ಲೀಲೆಗಳು ಅನಂತ. ಪರಿಪೂರ್ಣರಾದ ಮಾನವರಿಗೆ ಮಾತ್ರವೇ ಭಗವಂತನ ದರ್ಶನ ಸುಸಾಧ್ಯ. ಆದರೆ ಭಗವಂತನಿಗೆ ಭಕ್ತರ ಬಗ್ಗೆ ಪ್ರೇಮ ಅವ್ಯಾಜವಾದದ್ದು. ಸೃಷ್ಟಿಯಲ್ಲಿ ಭಗವತ್ ಪ್ರೇಮಕ್ಕೆ ಕರುಣೆಗೆ, ಹತ್ತಿರದ ಹೋಲಿಕೆಯೆಂದರೆ ಮಕ್ಕಳ ಬಗ್ಗೆ ತಾಯಿಗೆ ಇರುವ ಪ್ರೇಮ ಮಾತ್ರವೇ.

ಪ್ರತಿಯುಗದಲ್ಲೂ ಭಗವಂತನು ಅವತಾರಪುರುಷನಾಗಿ, ಅರ್ಚಾಸ್ವರೂಪನಾಗಿ ಆವಿರ್ಭವಿಸಿ ಮಾನವಕೋಟಿಯನ್ನು ಭಕ್ತಕೋಟಿಯನ್ನು ತೃಪ್ತಿ ಪಡಿಸುತ್ತಾನೆ. ಈ ಯುಗದಲ್ಲಿ ಭಗವಂತನು ಶ್ರೀ ವೆಂಕಟರಮಣನಾಗಿ ವೆಂಕಟಾದ್ರಿಯನ್ನು ತನ್ನ ಸ್ಥಿರ ನಿವಾಸವನ್ನಾಗಿ ಮಾಡಿಕೊಂಡು ಶರಣಾಗತರನ್ನು ಎಲ್ಲ ವೇಳೆಯಲ್ಲೂ ಕಾಪಿಡುವ ಪ್ರತ್ಯಕ್ಷ ದೈವವಾಗಿದ್ದಾನೆ. ಆರ್ತಿಯಿಂದ ಕರೆಯುವ ಪ್ರತಿಯೊಬ್ಬರನ್ನೂ ಆದರಿಸುವ ಆಪದ್ಬಾಂಧವ. ಆತನ ಕರುಣೆ ಪ್ರೇಮ, ಅನಂತ. ಹಾಗಾಗಿಯೇ ಶ್ರೀ ವೆಂಕಟೇಶ್ವರ ವೈಭವ ದಶದಿಶೆಯಲ್ಲಿ ವ್ಯಾಪ್ತಿ ಹೊಂದಿದೆ. ಭಕ್ತಕೋಟಿಯನ್ನು ತಣಿಸುತ್ತಿದೆ.

ಶ್ರೀ ವೆಂಕಟೇಶ್ವರಸ್ವಾಮಿಗೆ ನಡೆಯುವ ನಿತ್ಯವೈಭವ ಜಗದ್ವಿದಿತವೇ. ಆ ರಾಯ ನಿತ್ಯ ಕಲ್ಯಾಣಮೂರ್ತಿ. ಇನ್ನು ಆ ಜಗದೇಕಪತಿಗೆ ನಡೆಯುವ ಬ್ರಹ್ಮೋತ್ಸವ ವೈಭವ ಹೇಳತೀರದು. ಪ್ರತಿಯೊಬ್ಬರೂ ನೋಡಿ ದಣಿಯದೇಕಾದ ಮನೋಜ್ಞ ಉತ್ಸವ ಅದು.

ಬ್ರಹ್ಮನೇ ಸ್ವಯಂ ನಿಂತು ದೇವತೆಗಳೆಲ್ಲರೊಂದಿಗೆ ಸೇರಿ, ಸ್ವಾಮಿಗೆ ಮಾಡುವ ತಿರು ಉತ್ಸವಗಳೇ ಬ್ರಹ್ಮೋತ್ಸವ. ಬ್ರಹ್ಮೋತ್ಸವ ನಡೆಯುವಷ್ಟು ದಿನವೂ ಸರ್ವದೇವತೆಗಳಿಗೂ ವೆಂಕಟಾದ್ರಿಯ ಮೇಲೆಯೇ ಬಿಡಾರ.

ಶ್ರೀ ವೆಂಕಟೇಶ್ವರನೇ ಸರ್ವದೇವತಾ ಸ್ವರೂಪಿ. ಇದರ ಮೇಲೆ ಸರ್ವದೇವತಾಗಣದಿಂದ ಕೂಡಿದಂತಹ ಈ ಬ್ರಹ್ಮೋತ್ಸವ ಪರ್ವದಿನಗಳು ಅತ್ಯಂತ ವಿಶಿಷ್ಟ ಹಾಗೂ ವಂದನೀಯವಾದವು.

ಭಕ್ತಕೋಟಿಯೆಲ್ಲ ಈ ಬ್ರಹ್ಮೋತ್ಸವವನ್ನು ನೋಡಿ ತೃಪ್ತಿ ಹೊಂದಲು ಅನಾದಿಯಾಗಿ ದೇವಸ್ಥಾನ ಅನೇಕ ಏರ್ಪಾಡುಗಳನ್ನು ಮಾಡುತ್ತಿದೆ. ಈ ವರ್ಷವೂ ಪ್ರತ್ಯೇಕ ಏರ್ಪಾಡುಗಳೊಡನೆ, ಉತ್ಸವಗಳನ್ನು ಮತ್ತಷ್ಟು ರಮಣೀಯವಾಗಿಸಿ, ಯಾತ್ರಿಕರು ಈ ಉತ್ಸವಗಳನ್ನು ನೋಡಲು ದೇವಸ್ಥಾನ ವಿಶೇಷವಾಗಿ ಕೃಷಿ ಮಾಡುತ್ತಿದೆ.

ಬ್ರಹ್ಮೋತ್ಸವಗಳಲ್ಲಿ ತಿರುಮಲೆಯನ್ನು ದರ್ಶಿಸಿ, ಸ್ವಾಮಿಯನ್ನು ಸೇವಿಸಿ ತೃಪ್ತರಾಗಿರಿ.

**ಎನ್. ರಮೇಶ್‌ಕುಮಾರ್**
ಗೌರವ ಸಂಪಾದಕರು,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ.

# ಬೆಟ್ಟದ ಹಾದಿಯಲ್ಲಿ

---ಡಾ|| ಕೆ. ಸರ್ವೋತ್ತಮರಾವು.

ಕನ್ನಡಿಗರಿಗೆ ದೇವರೆಂದರೆ ತಿಮ್ಮಪ್ಪ. ಗುರುವೆಂದರೆ ಮಂಚಾಲಿಯ ರಾಘಪ್ಪ, ದಾಸರೆಂದರೆ ಪುರಂದರದಾಸರು ಎಂದು ಸ್ಥಿರವಾದ ಅಭಿಪ್ರಾಯವುಂಟು. ಕನ್ನಡಿಗರಿಗೂ ಹಾಗೂ ಆಂಧ್ರರಿಗೂ ಶ್ರೀನಿವಾಸ ಆರಾಧ್ಯಮೂರ್ತಿ. ಶನಿವಾರ ಪೂಜೆ ಮಾಡುವುದು. ಬ್ರಹ್ಮೋತ್ಸವ ಕಾಲದಲ್ಲಿ ಶ್ರೀನಿವಾಸ ಕಲ್ಯಾಣ ಪಾರಾಯಣ ಮಾಡುವುದು. ಶ್ರಾವಣ ಶನಿವಾರ ನಿಯಮಗಳನ್ನು ಪಾಲಿಸುವುದು ಆಚಾರವಾಗಿ ಕಾಣುತ್ತವೆ. ತಿರುಮಲೆ ಸೇರುವುದಕ್ಕೆ ಈ ಕಾಲದಲ್ಲಿ ಆಧುನಿಕ ಸೌಕರ್ಯಗಳಿದ್ದರೂ ತಿರುಪತಿಯಿಂದ ತಿರುಮಲೆಗೆ ನಡೆದು ಹೋಗುವುದು ಒಂದು ಆಚಾರ, ಪ್ರಾರ್ಥನೆ. ಮತ್ತು ಸುಂದರವಾದ, ಆಹ್ಲಾದಕರವಾದ ಪ್ರಯಾಣ.

ತಿರುಮಲೆಗೆ ಸೇರುವುದಕ್ಕೆ ಎರಡು ಮಾರ್ಗಗಳು. ಶ್ರೀನಿವಾಸ ಮಂಗಾಪುರದಿಂದ ಶ್ರೀವಾರಿಮೆಟ್ಟು ಸೇರಿ ಸೋಪಾನ ಹಾದಿಯಲ್ಲಿ ಬೆಟ್ಟಕ್ಕೆ ಸೇರುವುದು. ಮತ್ತೊಂದು ಪ್ರಸಿದ್ಧವಾದ ಗಾಳಿಗೋಪುರ ಹಾದಿ. ಈ ಮಾರ್ಗವು ಕ್ಷೇಮಂಕರ. ಈ ಸೋಪಾನ ಮಾರ್ಗವನ್ನು ಕಡಪಜಿಲ್ಲೆಯ ಮಟ್ಲಿ ಕುಮಾರ ಅನಂತರಾಯನ್ನು ನಿರ್ಮಿಸಿದ ಎಂಬುದು ಇತಿಹಾಸ. 'ಅಡಿಪ್ಪಡಿ' ಎಂದರೆ ಅಧೋಭಾಗದಲ್ಲಿ ಇರುವ ಸೋಪಾನ. ಕೆಲವು ಪಂಡಿತರು 'ಅಡಿಪ್ಪುಳ್ಳಿ' ಎಂದು ಹೇಳುತ್ತಾರೆ. ಪುಳಿ ಎಂದರೆ ಹುಣಿಸೆ ಮರ. ವೈಷ್ಣವ ಕ್ಷೇತ್ರಗಳಲ್ಲಿ 'ತಿಂತ್ರಿಣಿ'ಗೆ ಪ್ರತ್ಯೇಕ ಪ್ರಾಧಾನ್ಯವಿದೆ. ನಮ್ಮಾಳ್ವಾರಿಗೆ ತಿಂತ್ರಿಣಿ ಮರದ ಛಾಯೆಯಲ್ಲಿ ಜ್ಞಾನೋದಯವಾಯಿತು. ಅಡಿಪ್ಪಡಿಯಲ್ಲಿ ಹುಣಿಸೆ ಮರವಿದೆ. ಅದನ್ನೇ ಶೇಷಾಂಶವಾಗಿ ಭಾವಿಸುತ್ತಾರೆ. ಅಲಿಪಿರಿಯಲ್ಲಿ ಶ್ರೀಪಾದಗಳು, ತಲಯೇರುಗುಂಡು ಕುಮ್ಮರಿ ಮಂಟಪ ಪ್ರಧಾನವಾದ ಪ್ರಸಿದ್ಧಸ್ಥಳಗಳು.

ಶ್ರೀಪಾದವನ್ನು -- ಶ್ರೀನಿವಾಸನ ಪಾದಗಳ ಚಿಹ್ನೆ -- ಇಲ್ಲಿ ನೋಡಬಹುದು. ಇದಕ್ಕೆ ಚಾರಿತ್ರಿಕ ಪ್ರಾಧಾನ್ಯ ಉಂಟು. ಶ್ರೀರಾಮಾನುಜರು ಗೋವಿಂದರಾಜ ಪಟ್ಟಣದಲ್ಲಿ ಇದ್ದರು. ತಿರುಮಲೆನಂಬಿ ಬೆಟ್ಟದ ಮೇಲೆ ಶ್ರೀನಿವಾಸನ ಸೇವಾ ನಿರತರಾಗಿದ್ದರು. ಅವರು ಅನುದಿನ ತಿರುಮಲೆಯಿಂದ ತಿರುಪತಿ ಅಲಿಪಿರಿ ಭಾಗಕ್ಕೆ ಇಳಿದು ಬಂದು ರಾಮಾನುಜರಿಗೆ ರಾಮಾಯಣ ರಹಸ್ಯಗಳನ್ನು ಬೋಧಿಸುತ್ತಿದ್ದರು. ಆದ್ದರಿಂದ ಅವರಿಗೆ ಮಧ್ಯಾಹ್ನಕಾಲದಲ್ಲಿ ಶ್ರೀನಿವಾಸನ ಸೇವಾಕೈಂಕರ್ಯ ತಪ್ಪಿಹೋಯಿತು. ತಿರುಮಲೆ ನಂಬಿಯವರಿಗೆ ಈ ವ್ಯಥೆ ಮನಸಿನಲ್ಲಿ ಇತ್ತು. ಒಂದು ದಿನ ಪಾಠಪ್ರವಚನ ನಡೆಯುತ್ತಿದ್ದ ವೇಳೆಗೆ ಶ್ರೀಪಾದಗಳು ಪ್ರತ್ಯಕ್ಷವಾದವು. ಭಕ್ತಿಯಿಂದ ತಿರುಮಲೆನಂಬಿಯವರು ಸೇವಿಸಿದರು. ರಾಮಾನುಜರಿಗೂ ಸಂತೋಷವಾಯಿತು.

ತಲಯೇರುಗುಂಡು :-- ಗುಂಡು ಎಂದರೆ ಒಂದು ದೊಡ್ಡ ಕಲ್ಲು. ತಲೆ ಆಕಾರದಲ್ಲಿರುವ ಗುಂಡು. ಬೆಟ್ಟದ ಹಾದಿಯಲ್ಲಿರುವ ಗುಂಡುಗಳಲ್ಲಿ 'ತಲೆ' ಯಾದದ್ದು ಅರ್ಥಾತ್ ದೊಡ್ಡದಾಗಿರುವ



ಅಲಿಪಿರಿಯಿಂದ ಬೆಟ್ಟದ ಹಾದಿ

ಡಾ|| ಕೆ. ಸರ್ವೋತ್ತಮರಾವ್ ಅವರು ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯದಲ್ಲಿ ತೆಲುಗು ಪ್ರಾಚಾರ್ಯರಾಗಿದ್ದಾರೆ. ಹಲವು ಭಾಷೆಗಳಲ್ಲಿ ಪಾರಂಗತರಾದ ಅವರು ಅಸಂಖ್ಯ ಲೇಖನಗಳನ್ನೂ ಹಲವು ಹನ್ನೊಂದು ಉದ್ಗ್ರಂಥಗಳನ್ನೂ ರಚಿಸಿ ಕನ್ನಡ ತೆಲುಗು ತಮಿಳು ಓದುಗರಿಗೆ ಪರಿಚಿತರಾಗಿದ್ದಾರೆ. ವರು ಬೆಟ್ಟದ ಹಾದಿಯ ಬಗ್ಗೆ ಕಿರುಪರಿಚಯ ನೀಡಿದ್ದಾರೆ.

ತೋಣಕಾಲುಗಳನ್ನು ಈ ಗುಂಡು ಭಾಗಕ್ಕೆ ಆನಿಸುವರು. ಆದ್ದರಿಂದ ಅವರ ತಲೆನೋವು, ಕಾಲು ನೋವು ಹೋಗುತ್ತದೆ.

ಕುಮ್ಮರಿ ಮಂಟಪ :-- ವೀರಶೈವ ವೈಷ್ಣವ ಭಕ್ತಗಣದಲ್ಲಿ ಕುಂಬಾರರು ಕಾಣುತ್ತಾರೆ. ಬೆಟ್ಟದ ಹಾದಿಯಲ್ಲಿ 'ನಂಬಿ' ಒಬ್ಬ ಕುಂಭಕಾರ. ಅವನು ಶ್ರೀನಿವಾಸನ ಸೇವಾಕೈಂಕರ್ಯಕ್ಕಾಗಿ ಕುಂಭಗಳನ್ನು ಮಾಡುತ್ತಿರುವನು. ಆದ್ದರಿಂದ ಅವನಿಗೆ ವಿಶ್ರಾಂತಿಯಿಲ್ಲ. ಬೆಟ್ಟಹತ್ತಿ ಶ್ರೀನಿವಾಸನ ದರ್ಶನ ಭಾಗ್ಯಹೊಂದಲಿಕ್ಕೆ ಸಾಧ್ಯವಿಲ್ಲದೆ ಮಂಟಪದಲ್ಲಿ ಮಣ್ಣಿಂದ ಅಪ್ರಯತ್ನವಾಗಿ ಮಾಡಿದ ಹೂವುಗಳನ್ನು ದಾರು ವೇಂಕಟೇಶ್ವರನಿಗೆ ಅರ್ಪಿಸುತ್ತ ಕಾಲಕ್ಷೇಪ ಮಾಡುತ್ತಿದ್ದ. ದೇವರಿಗೆ ಆ ಕೈಂಕರ್ಯ ಪ್ರೀತಿಕರವಾಗಿತ್ತು. ತೊಂಡಮಾನ್ ಚಕ್ರವರ್ತಿ ಅನುದಿನ ಸುವರ್ಣಪುಷ್ಪಗ ... ತ್ತಿದ್ದ. ಒಂದು ದಿನ ಆ ಪುಷ್ಪಗಳ ಸ್ಥಾನದಲ್ಲಿ ಬದಲಾವಣೆ ಆಯಿತು. ನಂಬಿ ಅರ್ಪಿಸಿದ ಪುಷ್ಪಗಳು ಪ್ರತ್ಯಕ್ಷವಾದವು. ಅರಸನ ಸೇವಕರು ವಿಚಾರಣೆ ಮಾಡಿದರು. ತೊಂಡಮಾನ್ ಚಕ್ರವರ್ತಿಗೆ ಆಶ್ಚರ್ಯವಾಯಿತು. ತನಗಿಂತಲೂ ನಂಬಿ ಶ್ರೇಷ್ಠಭಕ್ತನೆಂದು ಸ್ಪಷ್ಟವಾಯಿತು. ಆ ನಂಬಿ ನೆನಪಾಗಿ ಇಂದಿಗೂ ಕುಮ್ಮರಿಮಂಟಪವಿದೆ.

ಗಾಳಿ ಗೋಪುರ :-- ಬೆಟ್ಟ ಹತ್ತುವವರು ತಮ್ಮ ಶ್ರಮವನ್ನು ಪರಿಹರಿಸಿಕೊಳ್ಳುವ ಪ್ರದೇಶ ಗಾಳಿಗೋಪುರ. ಕೆಲವರು ಕಾಳಿಗೋಪುರ ಎಂದು ಹೇಳಿದರು. ಗಾಳಿಗೋಪುರ ಎನ್ನುವುದು ಸಾರ್ಥಕ. ಗಾಳಿಗೋಪುರ ದಾಟಿದ ಮೇಲೆ ಗರುಡಾಲಯ, ನರಸಿಂಹಾಲಯ, ಅವ್ವಾಚರಿ ಕೊನೆಯಲ್ಲಿ ನಾಮಾಲಗವಿ ಕಂಡುಬರುತ್ತದೆ. ನಾಮಾಲಗವಿ ಬೆಟ್ಟದ ಪ್ರಾಚೀನ ಪಥದಲ್ಲಿ ಕಾಣುವ ಗುಹೆಗಳು. ಇಲ್ಲಿ ಲಭ್ಯವಾಗು ಕಲ್ಲುಗಳನ್ನು ವೈಷ್ಣವರು ನಾಮಗಳಿಗೆ ಉಪಯೋಗಿಸುವುದರಿಂದ 'ನಾಮಾಲಗವಿ' ಹೆಸರು ಸಾರ್ಥವಾಯಿತು.

ಮೋಕಾಲಿ ಮುಡುಪು :-- ಸಾಮಾನ್ಯರ ಕಣ್ಣುಗಳಿಗೆ ಬೆಟ್ಟದ ಶಿಲೆಗಳು ಕಲ್ಲುಗಳು ಮಾತ್ರವೆ ಆದರೆ ಭಕ್ತರಿಗೆ ಸಾಧಕರಿಗೆ ಆ ಶಿಲೆಗಳು ಸಾಲಗ್ರಾಮ ಮಯ. ಸಾಲಗ್ರಾಮಗಳಲ್ಲಿ ಮಹಾವಿಷ್ಣು ನಿವಾಸಮಾಡುವನೆಂದು ಐತಿಹ್ಯ. ವ್ಯಾಸರಾಯರಿ ಸಾಲಗ್ರಾಮಮಯವಾಗಿ ಸಾಕ್ಷಾತ್ಕಾರವಾಯಿತು ಆದ್ದರಿಂದ ಪಾದಗಳಿಂದ ಆ ದಾಸರು ನಡೆದಿ ಒಂದೊಂದು ಸೋಪಾನಕ್ಕೂ ಮಧ್ಯದ ದಾರಿ ಹೆಚ್ಚು ಆದ್ದರಿಂದ ನಡೆಯುವುದು ಬಹಳ ಕಠಿಣ. ಅನ್ನಮಚಾರ್ಯರು ಪಾದರಕ್ಷೆಗಳೊಡನೆ ನಡೆದ ವೇ ಅಲಮೇಲುಮಂಗೆ ಸಾಕ್ಷಾತ್ಕಾರವಾಗಿ ಹಿತೋಪದೇಶ ಮಾಡಿ ಅನುಗ್ರಹಿಸಿದಳೆಂದು ಹೇಳುತ್ತಾರೆ ಈ ಪ್ರದೇಶದಲ್ಲಿ ಅನ್ನಮಯ್ಯ ಶ್ರೀ ವೇಂಕಟೇಶ್ವ ಶತಕವನ್ನು ಆಶುವಾಗಿ ಹಾಡಿದರು.

ಮೋಕಾಲು ಮುಡುಪು ದಾಟಿದ ನಂತರ ತಿರುಮಲೆಯೇ. ಆಳ್ವಾರುಗಳು ಹಾಡಿದ ಮೂರ್ತಿ ದಾಸರ ಉಪಾಸನಾ ವಿಗ್ರಹ, ಭಕ್ತರಿಗೆ ವರಗಳನ್ನು ಕೊಡುವ ಮಹಾಕ್ರಾಂತಿವಿಶೇಷ ಶ್ರೀನಿವಾಸ ದರ್ಶನ ಮಾಡಬಹುದು.

✿✿✿✿✿✿✿

## ಸೂಚನ

ಕಾಲು ಹಾದಿಯಲ್ಲಿ ಬೆಟ್ಟವನ್ನು ಏರುವ ಯಾತ್ರಿಕರಿಗೆ ಹಲವು ರೀತಿಯ ಸೌಲಭ್ಯಗಳನ್ನು ಕಲ್ಪಿಸಲಾಗಿದೆ.

* ದಾರಿಯುದ್ದಕ್ಕೂ ಸಮೃದ್ಧವಾದ ನೀರು ನೆರಳು ಬೆಳಕುಗಳುಂಟು. ಕಾವಲುಭಟರ ಪಡೆ ಉಂಟು.
* ಉಪಹಾರಗೃಹ, ಪ್ರಥಮ ಚಿಕಿತ್ಸಾಕೇಂದ್ರ, ಆಹ್ಲಾದಗೊಳಿಸುವ ಜಿಂಕೆಗಳ ಉದ್ಯಾನವನ ಉಂಟು.
* ನಡೆದು ಬೆಟ್ಟವನ್ನೇರುವ ಯಾತ್ರಿಕರ ವಸ್ತುಗಳನ್ನು ಉಚಿತವಾಗಿ ಬೆಟ್ಟಕ್ಕೆ ಸೇರಿಸುವ ಸೌಲಭ್ಯ ಉಂಟು.

## ತ್ಯಾಗರಾಜ ಸ್ತುತಿ

ರಾಗ - ಮಧ್ಯಮಾವತಿ      ತಾಳ - ಆದಿ

ವೇಂಕಟೇಶ ನಿನು ಸೇವಿಂಪ ಪದಿ
ವೇಲು ಕನುಲು ಕಾವಲೆನಯ್ಯ (ವೇಂ)

ಪಂಕಜಾಕ್ಷ ಪರಿಪಾಲಿತ ಮುನಿಜನ
ಭಾವುಕಮಗು ದಿವ್ಯರೂಪಮುನು ಕನಿ (ವೇಂ)

ಎಕ್ಕುವ ನೀವನಿ ದಿಕ್ಕುಲು ಬೊಗಡಗ
ಅಕ್ಕರಗೊನಿ ಮದಿಸೊಕ್ಕಿ ಕನುಂಗೊನ
ನಿಕ್ಕಮು ನೀವೇ ಗ್ರಕ್ಕುನ ಬ್ರೋವು ತ-
ಳುಕ್ಕನಿ ಮೆರಿಸೆ ಚಕ್ಕತನಮುಲು ಗಲ (ವೇಂ)

ಏ ನೋಮು ಫಲಮೋ ನೀನಾಮಾಮೃತ
ಪಾನಮು ಅನು ಸೋಪಾನಮು ದೊರಿಕೆನು
ಶ್ರೀ ನಾಯಕ ಪರಮಾನಂದ ನೀ ಸರಿ
ಗಾನಮು ಶೋಭಾಯಮಾನಾಂಘ್ರುಲು ಗಲ (ವೇಂ)

ಯೋಗಿ ಹೃದಯ ನೀವೇ ಗತಿಯನು ಜನ
ಭಾಗಧೇಯ ವರಭೋಗೀಶ ಶಯನ
ಭಾಗವತ ಪ್ರಿಯ ತ್ಯಾಗರಾಜನುತ
ನಾಗಾಚಲಮುಪೈ ಬಾಗುಗಾ ನೆಲಕೊನ್ನ (ವೇಂ)

ಮುನಿಜನ ಭಾವ ತುಂಬಿದ ನಿನ್ನ ದಿವ್ಯರೂಪ ದರ್ಶನಕ್ಕೆ ಹತ್ತು ಸಾವಿರ ನಯನಗಳು ಬೇಕು. ನೀನೇ ಸರ್ವೋತ್ತಮನೆಂದು ದಿಕ್ಕುಗಳೆಲ್ಲ ಹೊಗಳುತ್ತಿರಲು, ಅಕ್ಕರೆಯಿಂದ ಮನಕ್ಕೆ ತಂದುಕೊಂಡವರನ್ನು ತಟಕ್ಕನೆ ಹೊಳೆಯುವಂತೆ ಕಾಪಾಡುವುದು ನಿಶ್ಚಯವೇ ಆಗಿದೆ. ಯಾವ ವ್ರತದ ಫಲವೋ ನಿನ್ನ ನಾಮ ಸೋಪಾನ ನನಗೆ ದೊರೆತು ಶ್ರೀನಾಯಕನಾದ ನಿನ್ನ ಬಳಿ ಬರುವಂತೆ ಆಗಿದೆ. ನೀನೇ ಗತಿ ಎಂಬ ಜನಗಳ ಉದ್ಧಾರಕನೇ, ಭಾಗವತ ಪ್ರಿಯನೇ, ತ್ಯಾಗರಾಜನುತನಾಗಿ, ಶೇಷಾಚಲದಲ್ಲಿ ಸ್ಥಿರವಾಗಿ ನೆಲೆಸಿರುವವನೇ ವೆಂಕಟೇಶ್ವರಸ್ವಾಮಿ! -

- ತ್ಯಾಗರಾಜಸ್ವಾಮಿಗಳು

# ಮಟ್ಲಕುಮಾರ ಅನಂತರಾಯ

(ಸಪ್ತಗಿರಿ 1979 ನವಂಬರ್)

ತೆಲುಗುಮೂಲ : ಪಿ. ಕೃಷ್ಣಮೂರ್ತಿ.



ಮಟ್ಲಕುಮಾರ ಅನಂತರಾಯ ಹಾಗೂ ಅವನ ಪರಿವಾರ

ಮಟ್ಲಕುಮಾರ ಅನಂತರಾಯ ದೇವಚೋಡ ವಂಶಸ್ಥ. ತಾಯಿ ಹೆಸರು ಚೆನ್ನಮ್ಮ ತಂದೆ ತಿರುವೆಂಗಳನಾಥ. ಈ ವಂಶದಲ್ಲಿ ಮೊದಲ ಪ್ರಸಿದ್ಧ ವ್ಯಕ್ತಿ ಮಲ್ಲದೇವರಾಯ. ಈತ ಶ್ರೀಕೃಷ್ಣದೇವರಾಯನ ಎರಡನೇ ಅಳಿಯ. ಇವರು ಕಡಪ ಜಿಲ್ಲೆಯ ರಾಯಚೋಟಿ (ರಾಚವೀಡು) ತಾಲ್ಲೂಕಿನ ಮಟ್ಲಗ್ರಾಮವಾಸಿಗಳು. ಮಟ್ಲಕುಮಾರ ಅನಂತರಾಯನು ವಿಜಯನಗರ ಸಾಮ್ರಾಜ್ಯದ ವಾರಸತ್ವದ ಯುದ್ಧಗಳ ನೆಪದಲ್ಲಿ ಅನೇಕ ಸಮರಗಳಲ್ಲಿ ಭಾಗವಹಿಸಿ, ಅನೇಕಮಂದಿ ಪಾಳಯಗಾರರನ್ನು ಜಯಿಸಿ ತನ್ನ ರಾಜ್ಯವನ್ನು ಅಹೋಬಿಲದಿಂದ ಇಂದಿನ ಕೋಡೂರು ಪ್ರಾಂತ್ಯದ ವರೆಗೆ ವಿಸ್ತರಿಸಿಕೊಂಡು ಮಟ್ಲ ಅನಂತರಾಯ ಪೇಟೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರ ಮಾಡಿದ. ಈ ಪ್ರಾಂತ್ಯ ಮಟ್ಲವಾರಿ ಸೀಮೆ ಎಂದಾಯಿತು. ಈತ ೧೭ ನೇ ಶತಮಾನದಲ್ಲಿದ್ದನೆಂದು ಶಾಸನಗಳು ಸಾರುತ್ತವೆ. ಇವರಿಗೆಲ್ಲ ಶ್ರೀ ವೆಂಕಟೇಶ್ವರಸ್ವಾಮಿಯೇ ಕುಲದೈವ. ಯುದ್ಧಗಳಲ್ಲಿ ಸಂಪಾದಿಸಿದ ಧನವನ್ನೆಲ್ಲ ದೇವಕಾರ್ಯದಲ್ಲಿಯೇ ವಿನಿಯೋಗಿಸಿದ ಅನಂತಕುಮಾರ ತಿರುಪತಿ ತಿರುಮಲೆ ಆಲಯಗಳಿಗೆ ಮಾಡಿದ ಸೇವೆ ಅಮೂಲ್ಯವಾದದ್ದು.

ಇಂದು ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಮುಂದೆ ಆಕಾಶವನ್ನು ಮುಟ್ಟುವ ರಾಜಗೋಪುರ ಈತ ನಿರ್ಮಿಸಿದ್ದೇ. ಅಧಿಕ ವೆಚ್ಚ ಪ್ರಯಾಸಗಳಿಂದ ಇದನ್ನು ನಿರ್ಮಿಸಿದ. ಇದನ್ನು ಮಟ್ಲವಾರಿ ಗೋಪುರ ಎನ್ನುವರು. ಈ ಗೋಪುರ ನಿರ್ಮಾಣದ ಬಗ್ಗೆ ಸ್ಥಾನಿಕರಲ್ಲಿ ಒಂದು ಕಥೆ ಪ್ರಚಲಿತವಿದೆ. ಅದರಂತೆ ಅನಂತರಾಯ ಈ ಗೋಪುರ ನಿರ್ಮಾಣಕ್ಕೆ ಧನವನ್ನು ಮೂಟೆಗಳಲ್ಲಿ ಹೇರಿ ಎತ್ತಿನಗಾಡಿಗಳಲ್ಲಿ ಸುತ್ತಮುತ್ತಲ ಗ್ರಾಮಗಳಿಂದ ತರಿಸುವಾಗ ರಾಜನ ಆರ್ಥಿಕ ಪರಿಸ್ಥಿತಿಯನ್ನು ಪರೀಕ್ಷಿಸುವ ಉದ್ದೇಶದಿಂದ ಆಲಯಶಿಲ್ಪಿ ಈ ಚೀಲಗಳಿಗೆ ರಂಧ್ರಗಳನ್ನುಂಟುಮಾಡಿ ಹಣವೆಲ್ಲ ದಾರಿಯಲ್ಲಿಯೇ ಸೋರಿ ಹೋಯಿತೆಂದು ವರದಿ ಮಾಡಿದನಂತೆ. ಅನಂತರಾಯ ತುಸುವೂ ಹಿಂದೆ ಮುಂದೆ ನೋಡದೆ ಮತ್ತೆ ಹಣವನ್ನು ತರಿಸುವುದಾಗಿಯೂ ಗೋಪುರ ನಿರ್ಮಾಣ ತಡೆಯಿಲ್ಲದೆ ನಡೆಯಬೇಕೆಂದೂ ಆಜ್ಞೆ ನೀಡಿದನಂತೆ. ಈ ದೃಷ್ಟಾಂತ ಆತನ ದೈವಭಕ್ತಿಗೆ, ಕಾರ್ಯದಕ್ಷತೆಗೆ, ಮೇಲಾಗಿ ಅಂದಿನ ಆರ್ಥಿಕ ಸೌಷ್ಟವಕ್ಕೆ ನಿದರ್ಶನ. ಈ ಗೋಪುರ ನಿರ್ಮಾಣದೊಡನೆಯೇ ಆತ ಬೆಟ್ಟದ ತಳದಲ್ಲಿನ ಅಲಿಪಿರಿಯಲ್ಲಿನ ಗೋಪುರವನ್ನೂ, ಗಾಳಿಗೋಪುರವನ್ನೂ ನಿರ್ಮಿಸಿದ. ಗೋವಿಂದರಾಜಸ್ವಾಮಿ ದ್ವಾರಗೋಪುರದಲ್ಲೂ ಅಲಿಪಿರಿಯ ಗೋಪುರದಲ್ಲೂ ಉಬ್ಬುಶಿಲ್ಪದ ಮಟ್ಲಕುಮಾರ ಅನಂತರಾಯ ಹಾಗೂ ಆತನ ಹೆಂಡತಿಯರ ಪ್ರತಿಮೆಗಳನ್ನು ಕಾಣಬಹುದಾಗಿದೆ. ಇವುಗಳ ಕೆಳಗೆ ಆತನ ಶಾಸನಗಳು ತೆಲುಗು ಭಾಷೆಯಲ್ಲಿ ಕೆತ್ತಲ್ಪಟ್ಟಿವೆ.

ಮಟ್ಲಕುಮಾರ ಅನಂತರಾಯನ ಕಾಲಕ್ಕಿಂತ ಮೊದಲು ಯಾತ್ರಿಕರು ಕಪಿಲತೀರ್ಥದಿಂದ ಕಾಲುಹಾದಿಯಲ್ಲಿ ನಡೆಯುತ್ತ ತಿರುಮಲೆಯನ್ನು ಸೇರುತ್ತಿದ್ದರು. ಅದು ದೂರವೂ, ಬಳಸೂ, ದುರ್ಗಮವೂ ಆದದ್ದರಿಂದ ಈತ ಅಲಿಪಿರಿಯ ಗೋಪುರದಿಂದ ಗಾಳಿಗೋಪುರದ ವರೆಗೆ ಸೋಪಾನ ಮಾರ್ಗವನ್ನೂ, ದಾರಿಯುದ್ದಕ್ಕೂ ನೆರಳು ನೀಡುವ ಮಂಟಪಗಳನ್ನೂ ನಿರ್ಮಿಸಿದ. ಅಲಿಪಿರಿಯ ಗೋಪುರದ ಬದಿಯ ಒಂದು ಇಂತಹದೇ ಮಂಟಪದಲ್ಲಿ ದೊಡ್ಡ ಶಾಸನವೊಂದು ತೆಲುಗು ಭಾಷೆಯಲ್ಲಿದೆ. ಈತ ಮಾಡಿದ ಯುದ್ಧಗಳು ಸಾಧಿಸಿದ ವಿಜಯಗಳು ಇದರ ಒಕ್ಕಣೆ. ಯಾತ್ರಿಕರ ಸೌಕರ್ಯಾರ್ಥವಾಗಿ ಈತ ಅಲಿಪಿರಿ ಹಾಗೂ ಮತ್ತಿತರ ಕಡೆಗಳಲ್ಲಿ ಅನ್ನಸತ್ರಗಳನ್ನೂ ಹುಟ್ಟುಹಾಕಿದ.

ಈತ ತಿರುಮಲೇಶನನ್ನು ಅನೇಕ ಬಾರಿ ಸಂದರ್ಶಿಸಿ ದೇವರಿಗೆ ಬಂಗಾರದ ಅಶ್ವವಾಹನ, ಗಜವಾಹನ, ಸರ್ವಭೂಪಾಲವಾಹನ, ಪದ್ಮಪೀಠ, ವಜ್ರಕಿರೀಟ, ಹಲವಾರು ತೆರನಾದ ಹಾರ ಆಭರಣಗಳನ್ನು ನೀಡಿದ್ದಾನೆ. ಶ್ರೀಕಾಳಹಸ್ತೀಶ್ವರನಿಗೆ ಬಂಗಾರದ ಮಯೂರವಾಹನವನ್ನೂ ಮಾಡಿಸಿದ.

ಕಡಪ ಮಂಡಲದ ಒಂಟಿಮಿಟ್ಟ ರಾಮಾಲಯದ ಪ್ರಾಕಾರ ಗೋಪುರಗಳು ಈತನ ನಿರ್ಮಾಣಗಳೇ. ರಾಯಚೋಟಿಯ ವೀರಭದ್ರಾಲಯದ ಗೋಪುರಗಳ ಜೀರ್ಣೋದ್ಧಾರ ಮಾಡಿಸಿ, ಹೊಸ ರಂಗು ಪೂಸಿ ಆಲಯ ನಿರ್ವಹಣೆಗೆ ಮಟ್ಲಗ್ರಾಮವನ್ನು ದತ್ತಿಯಾಗಿ ನೀಡಿದ. ಈ ಆಲಯದಲ್ಲಿ ಸ್ವಾಮಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಿರುವ ಪ್ರತಿಮೆಗಳ ರೇಖಾಚಿತ್ರಗಳನ್ನು ಅನಂತರಾಯ ಹಾಗೂ ಅವನ ಪತ್ನಿಯರೆಂದು ಗುರುತಿಸಿದ್ದಾರೆ. ಸಿದ್ಧವಟದಲ್ಲಿ ಚೆನ್ನಕೇಶವ ಮೂರ್ತಿಯನ್ನು ಪ್ರತಿಷ್ಠಾಪಿಸಿ, ತಿರುಚಾನೂರು, ಉದಯಗಿರಿ, ಪುಷ್ಪಗಿರಿ, ಚಂದ್ರಗಿರಿ, ದೇವುನಿಕಡಪ, ಅನಂತರಾಜ ಪೇಟೆಯ ಅನೇಕ ದೇವಾಲಯಗಳ ಗೋಪುರಗಳನ್ನು ನಿರ್ಮಿಸಿ, ಅವುಗಳಲ್ಲಿ ನಿತ್ಯಪೂಜಾ ಕೈಂಕರ್ಯಕ್ಕೆ ಭೂಮಿ, ಕಾಣಿಯನ್ನು ನೀಡಿದ್ದಾನೆ. ತಮಿಳುನಾಡಿನ ತಿರುವಳ್ಳೂರಾಲಯಕ್ಕೂ ಈತನ ದೇಣಿಗೆ ಸಂದಿದೆ.

ಈತ ವೈಷ್ಣವನಾದರೂ ಕೃಷ್ಣದೇವರಾಯನಂತೆ ಸರ್ವಮತ ಸಮಭಾವಿ. ಆತ ಹರಿಹರರನ್ನು ಸಮಾನ ಭಕ್ತಿಯಿಂದ ಪೂಜಿಸಿದ್ದೇ ಅಲ್ಲದೆ ತನ್ನ ರಾಜ್ಯದಲ್ಲೂ ಮತಸಾಮರಸ್ಯವನ್ನು ಎತ್ತಿಹಿಡಿದ. ★

# ತಿರುಮಲೆಯ ದೇವಾಲಯ



1. ಮಹಾದ್ವಾರ ಗೋಪುರ
2. ಪ್ರತಿಮಾ ಮಂಟಪ
3. ರಂಗನಾಯಕ ಮಂಟಪ
4. ಊಂಜಲ್ ಮಂಟಪ (ಸಾಳುವ ನರಸಿಂಹ ನಿರ್ಮಿತ)
5. ತಿರುಮಲರಾಯ ಮಂಟಪ
6. ಧ್ವಜಸ್ತಂಭ ಮಂಟಪ
7. ಮುಕುರ ಮಂಟಪ
8. ಪೂಲಬಾವಿ
9. ಸಂಪಂಗಿ ಪ್ರದಕ್ಷಿಣ
10. ಬೆಳ್ಳಿಯ ಬಾಗಿಲು
11. ವರದರಾಜಸ್ವಾಮಿ ಗುಡಿ
12. ಪೋಟು
13. ಬಂಗಾರು ಬಾವಿ
14. ಕಲ್ಯಾಣ ಮಂಟಪ
15. ಮಧ್ಯ ಮಂಟಪ
16. ಪಶ್ಚಿಮದ ಮಂಟಪಗಳು
17. ತಾಳ್ಳಪಾಕ ಅರ
18. ರಾಮಾನುಜರ ಗುಡಿ
19. ನರಸಿಂಹಸ್ವಾಮಿ ಗುಡಿ
20. ವಿಮಾನ ಪ್ರದಕ್ಷಿಣ
21. ತಿರುಮಾಮಣಿ ಮಂಟಪ
22. ಗರುಡಾಳ್ವಾರ್ ಸನ್ನಿದಿ
23. ಬಂಗಾರು ವಾಕಿಲಿ
24. ಹುಂಡಿ
25. ಸ್ನಪನ ಮಂಟಪ
26. ರಾಮರ್ ಮೇಡೈ
27. ಸಾಯಣ ಮಂಟ   ಪ
28. ಗರ್ಭಗುಡಿ ಆನಂದನಿಲಯ
29. ಮುಕ್ಕೋಟಿ ಪ್ರದಕ್ಷಿಣ
30. ವಿಶ್ವಕ್ಸೇನರ ಗುಡಿ

---ಆಂಗ್ಲಮೂಲ

-- ಕೆ.ವಿ. ರಾಮನ್.

(ಸ್ಕಲ್ಪರ್ ಆಫ್ ತಿರುಮಲ ತಿರುಪತಿ ಟೆಂಪಲ್)

ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯವು ಎರಡು ಎಕರೆ ಸ್ಥಳದಲ್ಲಿ (೪೧೩ ಅಡಿ ಉದ್ದ ಹಾಗೂ ೨೬೩ ಅಡಿ ಅಗಲ) ಶ್ರೀ ವೆಂಕಟೇಶ್ವರ ಸ್ವಾಮಿಯ ಗರ್ಭಗುಡಿಯ ಸುತ್ತ ಮೂರು ಪ್ರಾಕಾರಗಳಲ್ಲಿ ಹರಡಿದೆ.

ಈ ದೇವಾಲಯದ ಕಟ್ಟಡಕ್ಕೆ ಪೂರ್ವದಲ್ಲಿರುವ ಮಹಾದ್ವಾರಗೋಪುರದ ಮೂಲಕ ಪ್ರವೇಶ. ಈ ಪ್ರಾಕಾರದಲ್ಲಿಯೇ ಅಸಂಖ್ಯ ಶಿಲ್ಪಕಲಾಕೃತಿಗಳನ್ನು ಹೊಂದಿದ ಸುಂದರವಾದ ಮಂಟಪಗಳನ್ನು ನಾವು ಕಾಣುತ್ತೇವೆ. ಹೀಗಾಗಿ ಈ ಮಂಟಪಗಳನ್ನು ಒಂದೊಂದಾಗಿ ಗಮನಿಸಬೇಕು.

## ಪ್ರವೇಶದ್ವಾರ ಗೋಪುರ

ದೇವಾಲಯದ ಪೂರ್ವದಲ್ಲಿರುವ ಮಹಾದ್ವಾರದ ಗೋಪುರ ತನ್ನ ತಳಹದಿ, ಹಾಗೂ ಕಂಬಗಳಲ್ಲಿ ಸುಂದರವಾದ ಶಿಲ್ಪಗಳನ್ನು ಒಳಗೊಂಡಿದೆ. ಗೋಡೆಯ ಹೊರಭಾಗದ ಕಲ್ಲಿನಲ್ಲಿ ತೆಳುವಾದ ಉಬ್ಬು ಶಿಲ್ಪಗಳಲ್ಲಿ ನರ್ತಕಿಯರ ಹಾಗೂ ಪ್ರಾಣಿಗಳ ಚಿತ್ರಗಳನ್ನು ಕಾಣಬಹುದು. ಚೋಳ ಪಾಳಯಗಾರರು ತಮ್ಮತಮ್ಮ ಪ್ರಾಂತ್ಯಗಳಲ್ಲಿ ಅನುಸರಿಸಿದ ಅರ್ವಾಚೀನ ಚೋಳ ಶೈಲಿಯನ್ನು ತಳಗಟ್ಟಿನಲ್ಲೂ, ಕಂಬಗಳಲ್ಲೂ ಕಾಣಬಹುದು. ಗೋಪುರದ ಅಧಿಷ್ಠಾನದಲ್ಲಿ ಸ್ಥಾನಿಕ ಪಾಳಯಗಾರ ಯಾದವರಾಯನ ಆಳ್ವಿಕೆಯ ೧೨ನೆಯ ವರ್ಷದಲ್ಲಿ (ಕ್ರಿ.ಶ. ೧೨೭೭) ಹಾಕಿಸಿದ ಒಂದು ಶಾಸನವನ್ನು ಕಾಣಬಹುದು. ಇದು ಅವನ ರಾಣಿಯು ತಿರುವೆಂಗಡ ಮುಡೈಯಾನ್ ಸೇವೆಯಲ್ಲಿ ದೀಪ ಸೇವೆಗಾಗಿ ೬೪ ಹಸುಗಳನ್ನು ದಾನ ನೀಡಿದಂತೆ ತಿಳಿಸುತ್ತದೆ. ಗೋಪುರದ ಅಧಿಷ್ಠಾನದಲ್ಲಿ ೧೩ನೇ ಶತಮಾನಕ್ಕೆ ಸೇರಿದ ಇನ್ನೂ ಹಲವು ಶಾಸನಗಳಿವೆ. ರಾಮಾನುಜರ ಸಮಕಾಲೀನನಾದ ಗಟ್ಟಿದೇವರ ಯಾದವ ಮಹಾರಾಜನ ಆಳ್ವಿಕೆಯ ಕಾಲದಲ್ಲಿ ಈ ಗೋಪುರ ನಿರ್ಮಾಣವಾಗಿರಬಹುದು.

ಮಹಾದ್ವಾರ ಗೋಪುರದ ಅಧಿಷ್ಠಾನವು ಎರಡು ಅಂತಸ್ತುಗಳಲ್ಲಿ ಸಾಲುಗಂಬಗಳು ಪರಸ್ಪರ ನೇರ ವಿನ್ಯಾಸದಲ್ಲಿ ನಿಲ್ಲಿಸುವಂತೆ ಆಗಿದೆ. ಗೋಡೆಗಳಲ್ಲಿ ಯಾವುದೇ ರೀತಿಯ ಉಬ್ಬು ಶಿಲ್ಪಗಳೂ, ಕೋಷ್ಠಗಳೂ ಇಲ್ಲ. ಕಂಬಗಳು ಸುಂದರವಾದ ರೂಪದಲ್ಲಿವೆ. ಸಾಧಾರಣವಾದ ಗಾತ್ರದ ಬೋದಿಗೆ ಹಾಗೂ ಗಂಟಾಕಾರದ ಪಾದವನ್ನೂ ಹೊಂದಿವೆ. ೧೨-೧೩ನೇ ಶತಮಾನಗಳಲ್ಲಿ ಬಳಕೆಗೆ ಬಂದ ರೀತಿಯಿದು. ಗೋಪುರದ ಕಟ್ಟಡ ಇಟ್ಟಿಗೆ ಗಾರೆಗಳಿಂದಾಗಿ, ನೆಲದಿಂದ ಸುಮಾರು ಐವತ್ತು ಅಡಿ ಎತ್ತರಕ್ಕೆ ಏರಿ ಐದು ಅಂತಸ್ತುಗಳನ್ನು ಹೊಂದಿದೆ. ಪ್ರತಿ ಅಂತಸ್ತಿನಲ್ಲೂ ಒಂದು ಕಿರಿಯ ಬಾಗಿಲು - ಆಚೀಚೆಗೆ ದ್ವಾರಪಾಲಕರಿದ್ದಾರೆ. ಪ್ರತಿ ಮುಖವೂ ಕೂಟ, ಸಾಲ, ಪಂಜರಗಳ ಕಿರು ಆಲಯಗಳನ್ನು ಹೊಂದಿದೆ. ಶಿರಸ್ಸಿನಲ್ಲಿ ದೊಡ್ಡ ಸೂರು ಕೀರ್ತಿಮುಖವನ್ನು ಹೊಂದಿದೆ.

ಮಹಾದ್ವಾರ ಗೋಪುರದಲ್ಲಿ ಹಲವಾರು ಮೂರ್ತಿಗಳೂ -- ಗರುಡ, ಹನುಮಂತ, ಗಂಧರ್ವ ಗಣಗಳು --ಗೋಪುರ ತಳಗಳನ್ನು ಎತ್ತಿಹಿಡಿದಂತೆ ಇದ್ದು, ಇವೆಲ್ಲ ಜೀರ್ಣೋದ್ಧಾರಗೊಂಡಾಗ ಹೊಸದಾಗಿ ಪರಿವರ್ತಿತವಾಗಿವೆ. ಗೋಪುರ ದೇವತೆಗಳಾಗಿ, ರಾಮ, ಹಯಗ್ರೀವ, ಲಕ್ಷ್ಮೀನರಸಿಂಹ, ಸ್ಥಾಣು ನರಸಿಂಹ, ಕೇವಲ ನರಸಿಂಹ, ವಾಲಿ, ಸುಗ್ರೀವ, ಮೊದಲಾದವರನ್ನು ಕಾಣಬಹುದು.

## ಸಂಪಂಗಿ ಪ್ರದಕ್ಷಿಣ

ಮಹಾದ್ವಾರಗೋಪುರದಿಂದ ಆಲಯದ ಒಳಗ ಬಂದಾಗ ಮೊದಲು ಸಿಗುವುದು ಸಂಪಂಗಿ ಪ್ರದಕ್ಷಿಣ. ಆಲಯದ ಒಳಗಡೆ ಇದು ಅತಿ ವಿಶಾಲವೂ ಅತಿ ಹೊರಗೂ ಇರುವಂತಹದು. ಈ ಪ್ರಾಕಾರ ವಿವಿಧ ಪೂಜೆ, ಪುರಸ್ಕಾರಗಳಿಗಾಗಿ ಅತಿ ಹೆಚ್ಚು ಮಂಟಪಗಳನ್ನು ಹೊಂದಿದೆ.

## ಪ್ರತಿಮಾಮಂಟಪ

ಮಹಾದ್ವಾರದಿಂದ ಸಂಪಂಗಿ ಪ್ರದಕ್ಷಿಣೆಗೆ ಪ್ರವೇಶಿಸಿದ ಕೂಡಲೇ ದೊರೆಯುವುದು ೧೬ ಕಂಬಗಳಿಂದ ಕೂಡಿದ ಪ್ರತಿಮಾಮಂಟಪ. ಇಲ್ಲಿ ಕಂಚಿನ - ಶ್ರೀಕೃಷ್ಣದೇವರಾಯ ಅವನ ಪತ್ನಿಯರು, ಹಾಗೂ ವೆಂಕಟಪತಿ ರಾಯನ ಪ್ರತಿಮೆಗಳಿದ್ದು ಇದು ಪ್ರತಿಮಾಮಂಟಪವಾಗಿದೆ. ಇದು ವಿಜಯನಗರ ಕಾಲದ ಶಿಲ್ಪಕಲೆಯ ಉತ್ತಮ ಮಾದರಿಯಲ್ಲಿದ್ದು ಸುಂದರ ಶಿಲ್ಪಗಳಿವೆ. ರಾಮನ ಶಿವಧನುರ್ಭಂಗ, ರಾಮಪಟ್ಟಾಭಿಷೇಕ, ಹನುಮಂತನ ಸೀತಾ ಸಂದರ್ಶನ, ಕೃಷ್ಣಲೀಲೆ, ರಾಜ ವಿದೂಷಕ ಮೊದಲಾದವು ಕೆತ್ತನೆಯ ವಿಷಯ. ಎರಡು ಕಂಬಗಳು ಮೇಲೆ ಊರ್ಧ್ವಪುಂಡ್ರಗಳು ಶಂಖ ಚಕ್ರಗಳಿಂದಾವೃತವಾಗಿವೆ. ಎತ್ತರದ ಇಲ್ಲಿನ ಕಂಬಗಳಲ್ಲಿ ವ್ಯಾಳಿ, ಸಿಂಹ, ನಮ್ಮನ್ನೇ ನೋಡುವ ಗಣಗಳನ್ನು ಕಾಣಬಹುದು.

## ರಂಗನಾಯಕ ಮಂಟಪ

ಮುಂದುವರಿದಂತೆ ನಮ್ಮ ಎಡಕ್ಕೆ ದೊಡ್ಡದಾದ ರಂಗನಾಯಕ ಮಂಟಪವನ್ನು ಕಾಣಬಹುದು. ೧೪ನೇ ಶತಮಾನದಲ್ಲಿ ಮಲ್ಲಿಕ ಕಾಫರನ ಸೈನ್ಯ ದಕ್ಷಿಣಭಾರತದ ಮೇಲೆ ಧಾಳಿಮಾಡಿದಾಗ ಶ್ರೀರಂಗದ ರಂಗನಾಥಸ್ವಾಮಿಯ ಉತ್ಸವ ವಿಗ್ರಹವನ್ನು ತಂದು ಈ ಮಂಟಪದ ಒಳಗಿರುವ ಗುಡಿಯಲ್ಲಿ ಇಟ್ಟಿದ್ದರಿಂದ ಇದು ರಂಗನಾಯಕ ಮಂಟಪವಾಯಿತು. ಮಂಟಪದ ಹಿಂಭಾಗದಲ್ಲಿ ಒಂದು ಸಣ್ಣ ಗುಡಿಯೂ ಇದೆ. ಕ್ರಿ.ಶ. ೧೩೦೦-೬೦ರ ಮಧ್ಯಕಾಲದಲ್ಲಿ ಯಾದವರಾಜ ಶ್ರೀರಂಗನಾಥ ಯಾದವರಾಯ ಇದನ್ನು ಕಟ್ಟಿಸಿರಬೇಕೆಂಬ ಊಹೆಯಿದೆ. ಆದರೆ ಇದರ ನಿರ್ಮಾಣದ ಕಾಲದ ಬಗ್ಗೆ ಯಾವುದೇ ಶಾಸನಾಧಾರವೂ ಇಲ್ಲ. ಶೈಲಿಯನ್ನು ಹಿಡಿದು ಹೊರಟರೆ ಅದು ವಿಜಯನಗರ ಶೈಲಿಯನ್ನೇ ಹೋಲುವುದು. ಬೃಹದ್ಗಾತ್ರದ ಕಂಬಗಳು, ಸಿಂಹ, ವ್ಯಾಳಿ, ಓಡುವ ಅಶ್ವಗಳು, ಮತ್ತಿತರ ಶಿಲ್ಪ ವಿಷಯಗಳೂ ಇದನ್ನು ವಿಜಯನಗರ ಶಿಲ್ಪಶೈಲಿಯ ಮಂಟಪವಾಗಿಸುತ್ತವೆ. ಜೊತೆಗೇ ಕಂಬಗಳ ಮೇಲಿರುವ ವಿಜಯನಗರ ರಾಜಮುದ್ರೆಯ ವರಾಹಲಾಂಛನ ಇದರ ನಿರ್ಮಾಣದ ಬಗ್ಗೆ ಯಾವ ಸಂದೇಹವನ್ನೂ ಉಳಿಯಗೊಡದು. ಕಂಬ ಸರಣಿ ಆಸಕ್ತಿದಾಯಕವಾದ ಮಾದರಿಯನ್ನು ಮುಂದೊಡ್ಡುತ್ತದೆ. ಸೂರಿನ ತಳಭಾಗದ ಅಡ್ಡ ತೊಲೆಯಲ್ಲಿ ರಾಮರಾವಣಯುದ್ಧ ಶಿಲ್ಪಗಳಿವೆ. ಮಹಾಬಲಿ, ವಾಮನ, ರಾಮ ಲಕ್ಷ್ಮಣ ಮೊದಲಾದವರ ವಿಗ್ರಹಗಳೂ ಹಲಕಂಬಗಳಲ್ಲಿದ್ದು, ರಂಗಮಂಟಪವು೧೫, ೧೬ ಶತಕಗಳ ವಿಜಯನಗರದ ವಾಸ್ತು ಶಿಲ್ಪದ ಪ್ರೌಢಕಾಲದ್ದೇ ಆಗಿರಬೇಕು.

## ಊಂಜಲ್ ಮಂಟಪ ಹಾಗೂ ತಿರುಮಲರಾಯ ಮಂಟಪ

ರಂಗನಾಯಕ ಮಂಟಪದ ಪಶ್ಚಿಮಕ್ಕೆ ಒಂದಕ್ಕೊಂದು ಹೊಂದಿಕೊಂಡಂತೆ ಎರಡು ಮಂಟಪಗಳಿವೆ. ಇವುಗಳಲ್ಲಿ ದಕ್ಷಿಣಕ್ಕಿರುವುದು ಊಂಜಲ್ ಮಂಟಪ ಅಥವಾ ಸಾಳುವ ನರಸಿಂಹರಾಯ ಮಂಟಪ. ಉತ್ತರಕ್ಕಿರುವುದು ತಿರುಮಲರಾಯ ಮಂಟಪ. ಸ್ವಲ್ಪ ಎತ್ತರದಲ್ಲಿರುವ ಮಂಟಪವಾದ ಊಂಜಲ್ ಮಂಟಪವನ್ನು ಹದಿನೈದನೆಯ ಶತಮಾನದಲ್ಲಿ ಸಾಳುವ ನರಸಿಂಹನು ನಿರ್ಮಿಸಿರಬೇಕು. ವಿರೂಪಾಕ್ಷ II ನ ಕೊಲೆಯಾದ ನಂತರ ವಿಜಯನಗರ ಸಾಮ್ರಾಜ್ಯವನ್ನು ಅರಾಜಕತೆಯಿಂದ ರಕ್ಷಿಸಿ ನಲವತ್ತು ವರ್ಷಕಾಲ ರಾಜ್ಯಕ್ಕೆ ಸ್ಥಿರತೆಯನ್ನು ತಂದುಕೊಟ್ಟ ಸಾಳುವ ನರಸಿಂಹನು ವೀರಯೋಧನಾಗಿದ್ದು, ಮೊದಲಿಗೆ ಆತ ಚಂದ್ರಗಿರಿಯ ರಾಜಪ್ರತಿನಿಧಿಯಾಗಿದ್ದ. ವೈಷ್ಣವ ಭಕ್ತನಾಗಿ ದೇವಾಲಯಕ್ಕೆ

ಅನೇಕ ಸೇವೆಗಳನ್ನು ಮಾಡಿದ. ಹೊಸ ಹೊಸ ಗುಡಿಗೋಪುರಗಳ ನಿರ್ಮಾಣವೇ ಅಲ್ಲದೆ ಉತ್ಸವ ಕಾರ್ಯಗಳನ್ನೂ ಹೆಚ್ಚಿಸಿದ. ಆತನ ಈ ಕೆಲಸದಲ್ಲಿ ಕಂದಾಡೈ ರಾಮಾನುಜ ಅಯ್ಯಂಗಾರ್ ಅತ್ಯಂತ ದಕ್ಷತೆಯಿಂದ ನೆರವು ನೀಡಿದ್ದು, ಸಾಳುವ ನರಸಿಂಹನ ಹಲವಾರು ಶಾಸನಗಳಲ್ಲಿ ಉಲ್ಲೇಖಿತನಾಗಿದ್ದಾನೆ. ಆತ ರಾಜನಾಥ ಡಿಂಡಿಮ ಮೊದಲಾದ ಕವಿಗಳ ಆಶ್ರಯದಾತನೇ ಅಲ್ಲದೆ, ತಾನೇ ಸ್ವತಃ ಕವಿಯಾಗಿ ರಾಮಾಭ್ಯುದಯಂ ಕಾವ್ಯವನ್ನು ರಚಿಸಿದ. ಆತನ ರಾಣಿ ಶ್ರೀರಂಗಮಾಂಬಾದೇವಿಯೂ, ಅರಮನೆಯ ಇತರ ಸದಸ್ಯರೂ ಆಲಯಕ್ಕೆ ಅನೇಕ ದಾನಗಳನ್ನು ನೀಡಿದರು. ಒಂದು ಶಾಸನದ ಪ್ರಕಾರ ಆತ ೧೪೮೫ ರಲ್ಲಿ ಶೇಷಾದ್ರಿ ಪರ್ವತದ ದಾರಿಯಲ್ಲಿ ಲಕ್ಷ್ಮೀನರಸಿಂಹನ ಆಲಯ ನಿರ್ಮಾಣ ಮಾಡಿದ.

ವಿಜಯನಗರದ ವಾಸ್ತು ಶಿಲ್ಪದ ಶೈಲಿಯಲ್ಲಿಯೇ ರಚನೆಯಾಗಿರುವ ಊಂಜಲ್‌ಮಂಟಪದ ಕೇಂದ್ರ ಸ್ತಂಭದ ಸುತ್ತಲೂ ಇರುವ ಕಿರಿಯ ಕಂಬಗಳಲ್ಲಿ ಹಲವು ತಟ್ಟಿದಾಗ ಸಂಗೀತವನ್ನು ಹೊರಡಿಸುತ್ತವೆ. ಮುಖ್ಯ ಕಂಬಗಳಲ್ಲಿ ಅಶ್ವಗಳು ಓಡುವ ಚಿತ್ರಗಳಿವೆ. ಆಲಯದ ಉಬ್ಬು ಶಿಲ್ಪಗಳಲ್ಲಿ ಹೆಚ್ಚು ಸುಂದರವಾದ ಶಿಲ್ಪಗಳು ಇಲ್ಲಿವೆ.

ಊಂಜಲ್ ಸೇವೆಯನ್ನು ನಡೆಸಲೆಂದೇ ಮಂಟಪದ ಒಳಭಾಗವನ್ನು ಸಾಳುವ ನರಸಿಂಹನು ಕಟ್ಟಿಸಿದನೆಂಬುದು ಸ್ಪಷ್ಟವಾಗಿದೆ. ಈ ಮಂಟಪವನ್ನು ೧೬ನೇ ಶತಮಾನದಲ್ಲಿ ವಿಜಯನಗರದ ರಾಜನಾಗಿದ್ದ ಅರವೀಡು ಮನೆತನದ ತಿರುಮಲರಾಯನು ದೊಡ್ಡದಾಗಿಸಿರಬೇಕು. ಹಾಗಾಗಿ ತಿರುಮಲರಾಯ ಮಂಟಪವೆಂಬ ಹೆಸರು ಬಂದಿರಬೇಕು. ೧೫೬೫ ರಲ್ಲಿನ ರಕ್ಕಸುತಂಗಡಿ (ತಾಳಿಕೋಟೆ) ಯುದ್ಧದಲ್ಲಿ ವೀರಾವೇಶದಿಂದ ಹೋರಾಡಿದ ಅಳಿಯರಾಮರಾಯನ ಇಬ್ಬರು ಸೋದರರಲ್ಲಿ ತಿರುಮಲರಾಯನು ಒಬ್ಬ (ಮತ್ತೊಬ್ಬ-ವೆಂಕಟ).

ತಿರುಮಲರಾಯ ಮಂಟಪದ ಒಂದು ಮೂಲೆಗೆ ತೋಡರಮಲ್ಲ, ಅವನ ತಾಯಿ ಮಾತಾಮೋಹನದೇವಿ, ಪತ್ನಿ ಪಿತಾಬೀಬಿಯರ ಕಂಚಿನ ವಿಗ್ರಹಗಳಿವೆ. ಅವರ ಹೆಸರುಗಳನ್ನು ವಿಗ್ರಹಗಳ ಭುಜಗಳ ಮೇಲೆ ಕೆತ್ತಲಾಗಿದೆ. ೧೮ನೇ ಶತಮಾನದಲ್ಲಿ ಗೋಲ್ಕೊಂಡದ ನವಾಬನ ಅಧೀನದಲ್ಲಿದ್ದ ಕರ್ನಾಟಿಕ ಪ್ರಾಂತ್ಯಗಳನ್ನು ತೋಡರಮಲ್ಲ ನೋಡಿಕೊಳ್ಳುತ್ತಿದ್ದ. ಈತ ಗೋಲ್ಕೊಂಡದ ನವಾಬರ ಸೇನಾಧಿಪತಿಯಾಗಿಯೂ ಕೆಲಸ ಮಾಡಿದ.

ಸಂಪಂಗಿ ಪ್ರದಕ್ಷಿಣದ ಪ್ರಾಕಾರದ ಸುತ್ತ ಉದ್ದವಾದ ಅಂಗಳವೊಂದು ಕಂಬಗಳ ನೆರವಿನಿಂದ ನಿಂತಿದೆ. ಈ ಕಂಬಗಳಲ್ಲಿ ಅಷ್ಟೇನೂ ಉಬ್ಬಿಲ್ಲದ ದಶಾವತಾರ, ಹನುಮಂತ, ಮುನಿಗಳ ಚಿತ್ರಗಳಿವೆ. ಇಂತಹ ಉತ್ತಮವಾದ ಅಂಗಳಕ್ಕೆ ಬೇಕಾದ ಕಂಬಗಳ ಹೆಚ್ಚಿನ ಸಂಖ್ಯೆಯ ಕಾರಣದಿಂದಾಗಿ ಇಲ್ಲಿನ ಶಿಲ್ಪಚತುರತೆ ಕಡಮೆಯಾಯಿತು. ಈ ಮಂಟಪದ ಅಂಗಳವನ್ನು ಅಲ್ಲಲ್ಲಿ ಕಿರಿಯ ಕೊಟಡಿಗಳನ್ನಾಗಿಸಿ, ಅಡಿಗೆಯ ವಸ್ತುಗಳನ್ನು ಇಡಲೆಂದು, ಪಟ್ಟಾಡೈ - ದೇವರ ವಸ್ತ್ರಾಗಾರ, ರಾಮಾನುಜ ಕೂಟ - ಭಕ್ತರ ಉಚಿತ ಭೋಜನಶಾಲೆ, ಪಡಿಪೋಟು (ಸ್ವಾಮಿಯ ನೈವೇದ್ಯದ ಪಡಿಪ್ರಸಾದ ಪಾಕಶಾಲೆ), ಯಾಮುನತ್ತುರೈ (ಪುಷ್ಪಭಂಡಾರ) ಮೊದಲಾದವುಗಳಿಗೆ ಬಳಸಲಾಗುತ್ತಿದೆ.

ಸಂಪಂಗಿ ಪ್ರದಕ್ಷಿಣೆಯ ನಾಲ್ಕು ಮೂಲೆಗಳಲ್ಲೂ ನಾಲ್ಕು ಕಿರಿಯ ಮಂಟಪಗಳಿವೆ. ಉತ್ಸವ ಮೂರ್ತಿ ಹೊರಹೊರಟಾಗ ಅವರಿಗೆ ಇಳಿದುಕೊಳ್ಳಲು ಈ ಮಂಟಪಗಳಿವೆ. ಇವುಗಳನ್ನೂ ೧೫ನೇ ಶತಮಾನದಲ್ಲಿ ಸಾಳುವ ನರಸಿಂಹ ನಿರ್ಮಿಸಿರಬೇಕು. ತನ್ನ ಹೆಸರಿನಲ್ಲಿ ಒಂದು ತನ್ನ ಪತ್ನಿಯ ಹೆಸರಿನಲ್ಲಿ ಒಂದು ತನ್ನ ಇಬ್ಬರು ಮಕ್ಕಳ ಹೆಸರಿನಲ್ಲಿ ಮತ್ತೆರಡು. ಇವಾವುವೂ ಶಿಲ್ಪ ಚಾತುರ್ಯದ ದೃಷ್ಟಿಯಿಂದ ಪ್ರಮುಖವಾಗದಿದ್ದರೂ, ವಾಸ್ತು ವಿನ್ಯಾಸ ಹಾಗೂ ನಯಗಾರಿಕೆಗಳಲ್ಲಿ ಮುಖ್ಯವಾಗುತ್ತವೆ. ಉತ್ಸವ ಮೂರ್ತಿಗಳ ಮೆರವಣಿಗೆ ಹೊರಟಾಗ, ಇಲ್ಲಿ ವಿಶ್ರಾಂತಿ ಸಿಗುತ್ತಿತ್ತು.

## ಧ್ವಜಸ್ತಂಭ ಮಂಟಪ

ಸಂಪಂಗಿ ಪ್ರದಕ್ಷಿಣೆಯ ಪ್ರಾಕಾರದಲ್ಲಿನ ಮತ್ತೊಂದು ಮುಖ್ಯಮಂಟ ಧ್ವಜಸ್ತಂಭ ಮಂಟಪ. ಚಿನ್ನದ ಹೊದಿಕೆಯನ್ನು ಹೊದ್ದ ಶಿಲಾ ತಲದ ಮೇಲೆ ಧ್ವಜಸ್ತಂಭ ವೈಭವದಿಂದ ನಿಂತಿರುವುದು. ಇಲ್ಲಿನ ಪ್ರತಿ ಕಂಬದಲ್ಲೂ ಆಸಕ್ತಿದಾಯಕವಾದ ವಿಗ್ರಹಗಳಿವೆ. ಮತ್ಸ್ಯ ಕೂರ್ಮ, ಗರುಡವಾಹನ, ಯೋಗಾನರಸಿಂಹ, ಹನುಮಂತ, ಗೋಪಿಯರೊಡನೆ ಇರುವ ಕೃಷ್ಣ, ಬಕಾಸುರವಧೆ, ಶ್ರೀನಿವಾಸ ಕಲ್ಯಾಣ ಮುಂತಾದವು ನೋಡಲರ್ಹವಾದವು. ಧ್ವಜಸ್ತಂಭದ ಮೇಲೆಯೇ ಬಾಲಕೃಷ್ಣ, ಕಾಳೀಯಮರ್ದನ, ನವನೀತ ಕೃಷ್ಣ, ಮೊದಲಾದವನ್ನು ನೋಡಬಹುದು. (ಇಲ್ಲಿ ಬಲಿಪೀಠವೂ ಇದ್ದು ಅದೂ ಚಿನ್ನದ ಹೊದಿಕೆ ಪಡೆದಿದೆ.) ಇದನ್ನು ೧೫ನೇ ಶತಮಾನದಲ್ಲಿ ನಿರ್ಮಿಸಲಾಯಿತು. (ಈಚೆಗೆ ೧೯೮೨-೮೩ ರಲ್ಲಿ ಧ್ವಜಸ್ತಂಭದ ಒಳಗಿನ ಮರವನ್ನು ಬದಲಾಯಿಸಲಾಯಿತು.)

## ಅಯಿನಾ ಮಹಲ್

ಸಂಪಂಗಿ ಪ್ರದಕ್ಷಿಣೆಯ ಎಡಭಾಗದಲ್ಲಿ ಧ್ವಜಸ್ತಂಭದ ಉತ್ತರದಲ್ಲಿ ಈಚಿನ ನಿರ್ಮಾಣವಾದ ೪೨ ಅಡಿಗಳ ಉದ್ದದ ಚತುರಸ್ರಾಕಾರದ ಮತ್ತೊಂದು ಮಂಟಪವಿದೆ. ಈ ಮಂಟಪ ನಾಲ್ಕೂಕಡೆಗಳಲ್ಲಿ ಮುಚ್ಚಿದ್ದು ಐನಾ ಮಹಲ್ - ಮುಕುರ ಮಂಟಪವೆಂದು ಕರೆಯಲ್ಪಡುವುದು. ಇದರಲ್ಲಿ ಎರಡು ಭಾಗ. ಮುಂದೆ ಒಂದು ತೆರೆದ ಅಂಗಳ ಆರು ಕಂಬಗಳ ಆರು ಸಾಲು ಇದರ ಹಿಂದೆ ಒಂದು ಅಂತರಾಳ ಸಹಿತವಾದ ಗರ್ಭಗೃಹ. ಈಗ ಇಲ್ಲಿ ದೊಡ್ಡ ದೊಡ್ಡ ಕನ್ನಡಿಗಳಿದ್ದು, ಯಾವುದೇ ವಿಗ್ರಹವನ್ನೂ ಅಗಣಿತವಾಗಿ ಪ್ರತಿಬಿಂಬಿಸುತ್ತವೆ. ಇದರ ಮಧ್ಯದಲ್ಲಿ ಸ್ವಾಮಿಯ ಉತ್ಸವರನ್ನು ಆಸೀನಗೊಳಿಸುವ ಉಯ್ಯಾಲೆಯಿದೆ. ತಿರುಮಲೆಯ ಇಡೀ ಆಲಯದಲ್ಲಿ ಇದೊಂದೇ ಕಟ್ಟಡ ಯಾವುದೇ ಶಾಸನದಲ್ಲೂ ಉಕ್ತವಾಗದೆ ಇರುವುದು. ಜಿಲ್ಲೆಯ ಉನ್ನತ ಕಂದಾಯಾಧಿಕಾರಿಯೊಬ್ಬರು ೧೮೩೧ ರಲ್ಲಿ ಏಸಿಯಾಟಿಕ್ ಜರ್ನಲ್‌ಗೆ ಬರೆದ ಲೇಖನವೊಂದರಲ್ಲಿ ಈ ಮಂಟಪದಲ್ಲಿ ಅದ್ದಾಲ ಉತ್ಸವವನ್ನು (ಮುಕುರೋತ್ಸವ) ನಡೆಸುತ್ತಿದ್ದರೆಂದು ಹೇಳಿದ್ದಾರೆ.

ಇದರ ಉತ್ತರಕ್ಕೆ ಪೂಲಬಾವಿ ಎಂಬ ಒಂದು ಬಾವಿ ಇದೆ. ಹಿಂದೆ ಮೆಟ್ಟಿಲನ್ನೂ ಹೊಂದಿದ್ದ ಈ ಬಾವಿ (ತೊಟ್ಟಿ)ಯನ್ನು ದಿನವೂ ದೇವರ ನಿರ್ಮಾಲ್ಯವನ್ನು ಸಂಗ್ರಹಿಸಲು ಬಳಸುತ್ತಿದ್ದರು. ಕ್ರಮೇಣ ಮೆಟ್ಟಿಲನ್ನು ಮುಚ್ಚಿ ಬಾವಿಯನ್ನು ಬಳಕೆಯನ್ನು ನಿಲ್ಲಿಸಲಾಗಿದೆ.

(ಈ ಅಂಶವನ್ನು - ಅಯಿನಾಮಹಲ್ ಅನ್ನು ಶ್ರೀ ಎನ್. ರಮೇಶನ್ ಅವರ ಪುಸ್ತದಿಂದ ಅನುವಾದಿಸಲಾಗಿದೆ. ಕಾರಣ ಶ್ರೀ ಕೆ.ವಿ. ರಾಮನ್ ಅವರು ಇದನ್ನು ಬಿಟ್ಟಿದ್ದಾರೆ.)

## ವಿಮಾನ ಪ್ರದಕ್ಷಿಣ

ಧ್ವಜಸ್ತಂಭ ಮಂಟಪದಿಂದ ಎರಡನೆಯ ದ್ವಾರದಿಂದ ಹಾದು ಬಂದರೆ ವಿಮಾನ ಪ್ರದಕ್ಷಿಣಕ್ಕೆ ಬರುತ್ತೇವೆ.

ಒಳಕ್ಕೆ ಬರುತ್ತಿದ್ದಂತೆ ನಮ್ಮ ಎಡಗಡೆಗೆ ಮೂಲೆಯಲ್ಲಿ ಶ್ರೀ ವರದರಾಜಸ್ವಾಮಿಯ ಕಿರು ಗುಡಿಯನ್ನು ಕಾಣುತ್ತೇವೆ. ಇದು ಚತುರಸ್ರಾಕಾರದ ಗರ್ಭಗುಡಿಯನ್ನೂ ಮುಖ ಮಂಟಪವನ್ನೂ ಹೊಂದಿದೆ. ಗುಡಿಯ ಗೋಡೆಯ ಹೊರಭಾಗದಲ್ಲಿ ಹಲವಾರು ಶಾಸನಗಳಿವೆ (ಇತ್ತು). ಮಿಕ್ಕಂತೆ ಗೋಡೆಗಳ ಮೇಲೆ ಯಾವುದೇ ವಿಗ್ರಹಶಿಲ್ಪವೂ ಇಲ್ಲ. ಬಾಗಿಲ

ಚೌಕಟ್ಟಿನ ಮೇಲೆ ತಿರುನಾಮವಿದೆಯಷ್ಟೆ. ದ್ವಾರ ಬಂಧದ ಚಿತ್ತಾರದ ಶಿಲ್ಪ ಸುಂದರವಾಗಿದೆ. ಈ ಗುಡಿಯ ಮೇಲಿನ ಅತಿ ಹಳೆಯ ಶಾಸನ ಶ್ರೀರಂಗನಾಥ ಯಾದವ ರಾಯನ ಆಳ್ವಿಕೆಯ ೧೬೩೮ ವರ್ಷಕ್ಕೆ ಸಂಬಂಧಿಸಿದ್ದು. (೧೬೫೪-೫೫) ಹೀಗಾಗಿ ಇದು ಅದಕ್ಕೂ ಹಿಂದೆ ನಿರ್ಮಾಣವಾಗಿರಬೇಕು.

## ಪೋಟು

ವರದರಾಜಸ್ವಾಮಿ ಗುಡಿಗೆ ಹೊಂದಿಕೊಂಡಂತೆ ಆಲಯದ ದಕ್ಷಿಣಕ್ಕೆ ಪೋಟು ಕೊಠಡಿ (ಆಲಯದ ಪಾಕಶಾಲೆ) ಇಲ್ಲಿ ಮಡಪಲ್ಲಿ ನಾಚ್ಚಿಯಾರ್ - ವಕುಳಾದೇವಿ - ಶ್ರೀನಿವಾಸನ ತಾಯಿ-ಯ ವಿಗ್ರಹವಿದೆ.

ಪೋಟು ಶಾಲೆಯ ಬಾಗಿಲ ಬಳಿ ಬಂಗಾರು ಬಾವಿ ಇದೆ. ಇಲ್ಲಿಂದ ಪಾಕಶಾಲೆಗೆ ಅಗತ್ಯವಾದ ನೀರನ್ನು ಕಲ್ಲಿನ ತೂಬುಗಳಲ್ಲಿ ತೆಗೆದುಕೊಳ್ಳಲಾಗುತ್ತದೆ. ವಿಜಯನಗರದ ಹಂಪೆಯಲ್ಲಿ ಇದೇ ರೀತಿಯ ನೀರು ಸರಬರಾಜಿನ ವ್ಯವಸ್ಥೆಯಿರುವುದನ್ನು ಇದು ನೆನಪಿಗೆ ತರುತ್ತದೆ. ಪೋಟುವಿನಿಂದ ಮುಂದೆ ಬಂದರೆ ಮೂಲೆಯಲ್ಲಿ ಕಲ್ಯಾಣಮಂಟಪವಿದೆ. ಇಲ್ಲಿ ಮೊದಲಿಗೆ ಉತ್ಸವ ಮೂರ್ತಿಯ ಕಲ್ಯಾಣೋತ್ಸವ ನಡೆಯುತ್ತಿತ್ತು. ಇದೊಂದು ಮುಖ್ಯ ಮಂಟಪ. ಕಾರಣವೆಂದರೆ--ಬ್ರಹ್ಮೋತ್ಸವ ಅಧ್ಯಯನೋತ್ಸವಗಳಲ್ಲಿ ಉತ್ಸವ ಮೂರ್ತಿ ಮಲೆಯಪ್ಪಸ್ವಾಮಿಯೂ ಶ್ರೀದೇವಿ ಭೂದೇವಿಯರೂ ಇಲ್ಲಿ ಉಳಿಯುತ್ತಾರೆ. ಉತ್ಸವ ಮೂರ್ತಿಯ ಆಸ್ಥಾನವೂ ಇಲ್ಲಿಯೇ ನಡೆಯುತ್ತದೆ. ಹಾಗಾಗಿ ಈ ಮಂಟಪವನ್ನು ಶಿಲ್ಪದಿಂದಲೂ, ಕುಸುರಿಗೆಲಸದಿಂದಲೂ ಅಂದಗೊಳಿಸಲಾಗಿದೆ. ಕಂಭಗಳನ್ನು ವಿವಿಧ ರೀತಿಯಲ್ಲಿ ಕೆತ್ತಲಾಗಿದೆ. ಹಲವು ಚತುರ್ಮುಖಿ ಅಷ್ಟಮುಖಿ ಅನುಕ್ರಮದವಾದರೆ, ಹಲವು ಸೂಕ್ಷ್ಮಕುಸುರಿ ಕೆಲಸದ, ಭಾರಿ ಕೋಷ್ಟದ ಕಂಬಗಳು. ಕಲ್ಯಾಣ ಮಂಟಪದ ಒಳಗಡೆ ನಾಲ್ಕು ಕಾಲಿನ ಮಧ್ಯಮಂಟಪವಂತೂ, ತುಂಬ ನುಣುಪುಗೊಳಿಸಿದ ಕರಿಶಿಲೆಯಿಂದ ಮಾಡಿದ ಕರಕುಶಲ ವಸ್ತುವಾಗಿದೆ. ಚಲನೆಯಲ್ಲಿರುವ ಕನ್ಯೆ ಅಥವಾ ಚಲಿತ ಕಪಿ, ಹೂಗೊಂಚಲು, ಸೂರಿನಡಿಯ ನರ್ತನ ಭಂಗಿಯ ಕನ್ಯೆಯರು, ಎಲ್ಲ ಸೇರಿ ಈ ಮಂಟಪಕ್ಕೆ ಶೋಭಾಯಮಾನವಾದ ಆಕರ್ಷಣೆಯನ್ನು ಒದಗಿಸಿದೆ. ದಂತ ಶಿಲ್ಪವನ್ನೂ ಸ್ವರ್ಣಕಾರರ ಕುಶಲ ಕಲೆಯನ್ನೂ ನೆನಪಿಗೆ ತರುವ ಈ ಸೂಕ್ಷ್ಮಕುಸುರಿಕಲೆಗಾರಿಕೆ ವಿಜಯನಗರದರಸರು ಪರಂಪರೆಯಿಂದ ಪಡೆದ ಹೊಯ್ಸಳ ಕಲೆಯ ಪ್ರಭಾವವಿರಬೇಕು.

ಕಲ್ಯಾಣ ಮಂಟಪವೂ ಅದರ ಉಪಮಂಟಪಗಳೂ ತನ್ನ ಕಂಬಗಳಲ್ಲಿ ಅನೇಕ ಉಬ್ಬುಶಿಲ್ಪಗಳನ್ನು ಹೊಂದಿವೆ. ಇವುಗಳಲ್ಲಿ ಪ್ರಮುಖವೆಂದರೆ ತ್ರಿವಿಕ್ರಮ, ಸುದರ್ಶನ, ಹದಿನಾರು ಕೈಗಳ ನರಸಿಂಹ ಮತ್ತು ದೇವಿಯರು, ಲಕ್ಷ್ಮೀನರಸಿಂಹ, ಹಯಗ್ರೀವ, ಗರುಡವಾಹನ, ಲತೆಗಳು.

## ಪಶ್ಚಿಮ ಮಂಟಪಗಳು

ವಿಮಾನ ಪ್ರದಕ್ಷಿಣೆಯ ಹೊರ ಅಂಚಿನಲ್ಲಿ ಉದ್ದಕ್ಕೂ ಪಶ್ಚಿಮದಲ್ಲಿ ಕಂಬಗಳ ಆಧಾರದಲ್ಲಿ ನಿಂತಿರುವ ಮಂಟಪವಿದೆ. ವಿಜಯನಗರದ ಕಾಲದ್ದೇ ಆದ ಈ ಕಟ್ಟಡವೂ, ಸಾಧಾರಣವಾದ ಉಬ್ಬುಶಿಲ್ಪಗಳನ್ನು ಒಳಗೊಂಡಿದೆ. ಆದರೂ ಇವುಗಳಲ್ಲಿ ಹಲವು -- ಉದಾ -- ಹಾವು ಕೋತಿ, ಧನುರ್ಭೂಷಿತೆ, ಹಂಸ, ಒರಳಿಗೆ ಕಟ್ಟಿದ ಕೃಷ್ಣ, ರಂಗನಾಥ ಮೊದಲಾದವು - ವೈವಿಧ್ಯ ಸೂಚಕವಾಗಿವೆ. ಈ ಪಶ್ಚಿಮ ಮಂಟಪದಲ್ಲಿ ವೇದಪಾರಾಯಣದಾರರು ಕುಳಿತು ವೇದಗಳನ್ನು ಪಾರಾಯಣ ಮಾಡುತ್ತಿದ್ದರು. ಈ ಮಂಟಪವನ್ನು ಕೊಠಡಿಗಳನ್ನಾಗಿಸಿ ದೀಪಗಳ ಕೋಣೆ, ಕಾಮಗಾರಿ ಕೋಣೆ, ಪಲ್ಲಕ್ಕಿ ಕೋಣೆ, ಉತ್ತರದ ಕಡೆ ಸಂಕೀರ್ತನೆಗಳ ತಾಮ್ರ ಫಲಕಗಳನ್ನು ಹೊಂದಿದ ಸಂಕೀರ್ತನ ಭಂಡಾರ ಮೊದಲಾದವುಗಳನ್ನಾಗಿಸಲಾಗಿದ್ದಿತು. ಈಗ ಪಶ್ಚಿಮ ಮಂಟಪದಲ್ಲಿ ಪರಕಾಮಣಿ ನಡೆಯುತ್ತದೆ. ಸಂಕೀರ್ತನ ಭಂಡಾರದ ಬಾಗಿಲ ಎರಡೂ ಬದಿಯಲ್ಲಿ ತಾಳ್ಳಪಾಕ ಕವಿಗಳ ಉಬ್ಬು ಶಿಲ್ಪಗಳಿವೆ.

## ರಾಮಾನುಜರ ಗುಡಿ

ವಿಮಾನ ಪ್ರದಕ್ಷಿಣೆಯ ಉತ್ತರ ಭಾಗದಲ್ಲಿ ಹುಂಡಿಯ ಎದುರಿಗೆ ಸಂಕೀರ್ತನ ಭಂಡಾರದ ಪಕ್ಕದಲ್ಲಿ ಬಲಕ್ಕೆ ರಾಮಾನುಜರ ಗುಡಿಯಿದೆ. ಎಂಬೆರುಮಾನಾರರ ಮೇಲಣ ಗೌರವ ಭಕ್ತಿಗಳಿಂದಾಗಿ,



ಶ್ರೀ ವರದರಾಜಸ್ವಾಮಿ

ಅವರು ತಿರುಮಲೆಯ ಗುಡಿಗೆ ಸಲ್ಲಿಸಿದ ಸೇವೆಯಿಂದಾಗಿ ೧೩ನೇ ಶತಮಾನದಲ್ಲಿ ಈ ಗುಡಿ ನಿರ್ಮಾಣವಾಗಿರಬೇಕು. ಪಾಂಡ್ಯರಾಜರ ರಾಜಚಿಹ್ನೆ ಮೀನು ಹಾಗೂ ಗಾಳವನ್ನು ಗುಡಿಯ ಬಾಗಿಲ ಪಕ್ಕದ ಗೋಡೆಯಲ್ಲಿ ಕೆತ್ತಲಾಗಿದೆ. ಕಡಪ ನೆಲ್ಲೂರುಗಳ ವರೆಗೆ ಪಾಂಡ್ಯರಾಜ್ಯ ವಿಸ್ತರಿಸಿದ್ದ ೧೩ನೇ ಶತಮಾನದಲ್ಲಿದು ನಿರ್ಮಿತವಾಗಿರಬಹುದು. ಈ ಕಾಲದಲ್ಲಿ ಪಾಂಡ್ಯರ ಅಧೀನರಾಗಿ ಯಾದವರಾಯರು ಆಳುತ್ತಿದ್ದರು. ರಾಮಾನುಜರು ವ್ಯಾಖ್ಯಾನ ಮಾಡುತ್ತಿರುವಂತೆ ಇಲ್ಲಿನ ವಿಗ್ರಹವಿದೆ. ರಾಮಾನುಜರ ಸೇವೆಯಿಂದಾಗಿ ಅವರನ್ನು ದೇವರ ಮಟ್ಟಕ್ಕೇರಿಸಿ ಗುಡಿಯನ್ನು ಕಟ್ಟಿದರು. ಆದರೆ ಗುಡಿಯ ಮುಂದಿನ ಮುಖ ಮಂಟಪ ಮಾತ್ರ ವಿಜಯನಗರದರಸರ ಕಾಲದ್ದು.

## ನರಸಿಂಹಸ್ವಾಮಿ ಗುಡಿ

ರಾಮಾನುಜರ ಗುಡಿಯ ಪಕ್ಕದಲ್ಲಿ ಪಶ್ಚಿಮಕ್ಕೆ ಮುಖ ಮಾಡಿದ ಯೋಗಾನರಸಿಂಹಸ್ವಾಮಿ ಗುಡಿಯಿದೆ. ಇದರ ಸುತ್ತ ಪ್ರದಕ್ಷಿಣಾಪಥವೂ ಉಂಟು. ಬಹುಶಃ ೧೫ನೇ ಶತಮಾನದಲ್ಲಿ ನಿರ್ಮಿತವಾಗಿರಬಹುದು. ಇಲ್ಲಿನ ಕಂಬಗಳಲ್ಲಿ ಆಸಕ್ತಿದಾಯಕ ವಿಗ್ರಹಗಳನ್ನು ಕಾಣಬಹುದು.

## ತಿರುಮಾಮಣಿ ಮಂಟಪ

ಗರ್ಭಗೃಹ ಸಮುದಾಯದ ಮುಂದುಗಡೆ ಇರುವ ಮಂಟಪವಿದು. ಪೂರ್ವದಲ್ಲಿ ಗರ್ಭಗೃಹಕ್ಕೆ ಎದುರು ಮುಖವಾಗಿ ಗರುಡಾಳ್ವಾರರ ಸನ್ನಿಧಿಯಿದೆ. ಇದರ ಈಶಾನ ಮೂಲೆಯಲ್ಲಿ ಹುಂಡಿಯನ್ನಿಡಲಾಗಿದೆ. ಕ್ರಿಶ. ೧೪೧೭ ರಲ್ಲಿ ಚಂದ್ರಗಿರಿಯ ಮಲ್ಲಣ ಅಥವಾ ಮಾಧವ ದಾಸನಿಂದ ಇದರ ನಿರ್ಮಾಣವಾಯಿತು. ಹೀಗಾಗಿ ಇದು ಪ್ರಾಚೀನ ವಿಜಯನಗರದ ಶಿಲ್ಪಕಲೆಯ ರೀತಿಯದಾಯಿತು. ಇದರ ಕಂಬಗಳು ಸಿಂಹ, ವ್ಯಾಳಿಗಳನ್ನೂ ಪುಷ್ಪಲತೆಗಳನ್ನೂ ಹೊಂದಿದೆ. ಸಾಧಾರಣ ಉಬ್ಬಿದ ಶಿಲ್ಪಕೃತಿಗಳು. ಅಶೋಕವನದ ಸೀತೆ ಹನುಮಂತನಿಗೆ ಚೂಡಾಮಣಿನೀಡುವಿಕೆ, ರಾಮ ಸೀತಾಲಕ್ಷ್ಮಣ ಹನುಮಂತ, ವಾಲಿಯನ್ನು ಯುದ್ಧಕ್ಕೆ ಹೋಗದಿರು ಎಂದು ಬೇಡುವ ತಾರೆ, ಕೃಷ್ಣ ಜೀವನ ಚಿತ್ರಗಳು ಗಜೇಂದ್ರವರದ ಮೊದಲಾದವು, ಗಮನಾರ್ಹವಾಗಿವೆ.

## ಸ್ವರ್ಣದ್ವಾರ-ಬಂಗಾರುವಾಕಿಲಿ

ತಿರುಮಾಮಣಿ ಮಂಟಪದಿಂದ ಗರ್ಭಗುಡಿಯತ್ತ ಹೊರಡಲು ಬಂಗಾರುವಾಕಿಲಿ ದ್ವಾರವಾಗುತ್ತದೆ. ಈ ಬಾಗಿಲಿನ ಎರಡೂ ಕಡೆ ಎತ್ತರವಾದ ಜಯವಿಜಯರ ವಿಗ್ರಹಗಳಿವೆ. ಬಂಗಾರದ ಮುಲಾಮುಹಚ್ಚಿದ ಫಲಕಗಳನ್ನು ಹೊಂದಿದ ಬಾಗಿಲುಗಳು ವಿಷ್ಣುವಿನ ಸಣ್ಣ ಸಣ್ಣ ಪ್ರತಿಮೆಗಳನ್ನು ಹೊಂದಿದೆ. ಈ ಬಾಗಿಲ ಮುಂದೆಯೇ ಸುಪ್ರಭಾತ ಪಠಣವಾಗುತ್ತದೆ. ಕಾರಣ ಇಲ್ಲಿ ವಿಷ್ಣುವಿನ ಐದು ಮೂರ್ತಿಗಳು - ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚಾಮೂರ್ತಿಗಳು ಇರುವಿಕೆ.

## ಸ್ನಪನ ಮಂಟಪ

ಬಂಗಾರುವಾಕಿಲಿಯನ್ನು ಹೊಕ್ಕು ಒಳಬಂದರೆ ದೊರೆಯುವುದು ಸ್ನಪನ ಮಂಟಪ. ಇದೂ ಸಹ ವಿಜಯನಗರದ ಕಾಲದ ಕಟ್ಟಡ. (ಇಲ್ಲಿ ನಾಲ್ಕು ಕಂಬಗಳಿದ್ದು ಎರಡು ಕೋಣೆಗಳಂತೆ ಮಾಡಲಾಗಿದೆ.) ಬಾಲಕೃಷ್ಣ, ಕಾಳೀಯಮರ್ದನ, ಯೋಗ ನರಸಿಂಹ, ಮೊದಲಾದ ವಿಗ್ರಹಗಳು ಉಬ್ಬುಶಿಲ್ಪಗಳಾಗಿ ತೋರುತ್ತವೆ.

## ಗರ್ಭಗುಡಿಯ ವಾಸ್ತು

ಗರ್ಭಗುಡಿ ಹಾಗೂ ಅಂತರಾಳಗಳು ಚತುರಸ್ರಾಕಾರವಾಗಿದ್ದು, ವಿಮಾನಕಳಸಕ್ಕೆ ಸುಂದರ ಪಾಂಡ್ಯನು ಚಿನ್ನದ ಮುಲಾಮು ಲೇಪಿಸಿದ. (ಕ್ರಿ.ಶ. ೧೨೬೨) ವೀರನರಸಿಂಹರಾಯನು ಚಿನ್ನದ ತುಲಾಭಾರ ಮಾಡಿಕೊಂಡು ಆ ಚಿನ್ನವನ್ನು ಈ ದೇವಾಲಯವನ್ನು ದೇವತೆಗಳ ಸುರಗಿರಿಯನ್ನಾಗಿ ಮಾಡಲು ಬಳಸಿದ. ಹೀಗಾಗಿ ೧೩ನೇ ಶತಮಾನದಲ್ಲಿ ಮಹತ್ವದ ಜೀರ್ಣೋದ್ಧಾರದ ಕೆಲಸಗಳು ನಡೆದವು. ವಾಸ್ತು ಲಕ್ಷಣಗಳೂ ಈ ಕಾಲವನ್ನೇ ನಿರ್ದೇಶಿಸುತ್ತವೆ. ಕೋಷ್ಠಗಳು ಸಾಧಾರಣವಾದ ವಿಮಾನಗಳನ್ನಲ್ಲದೆ ತೋರಣವನ್ನು ಮಾತ್ರವೇ ಹೊಂದಿ ಚೋಳರ ಕಾಲದ ಯಾಳಿ ಮುಖಗಳನ್ನು ಹೊಂದಿವೆ. ಜೀರ್ಣೋದ್ಧಾರದ ಕೆಲಸ ಕೈಗೊಂಡ ವೀರನರಸಿಂಗ ಯಾದವರಾಯನು, ಆಲಯದ ಹಳೆಯ ಗೋಡೆಯ ಮೇಲಿದ್ದ ಶಾಸನಗಳೆಲ್ಲ ಹೊಸ ಗೋಡೆಯ ಮೇಲೂ ಬರುವಂತೆ ನೋಡಿಕೊಂಡ. ಈ ಬಗ್ಗೆ ರಾಜನ ಶಾಸನವೊಂದು ಆಲಯದ ಗೋಡೆಯ ಮೇಲಿದ್ದು, ಇದು ಆತನ ಆಸಕ್ತಿ - ಹಳೆಯ ಶಾಸನಗಳನ್ನು ಸಂರಕ್ಷಿಸುವ ಆಸಕ್ತಿಯ ಆಳವನ್ನು ವಿವರಿಸುತ್ತದೆ. ಹೀಗಾಗಿ ೧೩ನೇ ಶತಮಾನದ ಹೊರಗೋಡೆಯ ಮೇಲೆ ಚೋಳ ರಾಜರ ರಾಜರಾಜ - ೧, ರಾಜೇಂದ್ರ- ೧ ಮೊದಲಾದವರ ಶಾಸನಗಳು ಕಾಣುತ್ತವೆ.

## ರಾಮರ್ ಮೇಡೈ

ಸ್ನಪನ ಮಂಟಪದಿಂದ ನಾವು ರಾಮ[...] ಮೇಡೈಗೆ ಬರುತ್ತೇವೆ. ಪ್ರಾಚೀನಕಾಲದ[...] ರಾಮರ್ ಮೇಡೈ ಮುಕ್ಕೋಟಿ ಪ್ರದಕ್ಷಿಣೆ[...] ಪೂರ್ವಭಾಗವಾಗಿದ್ದಿತು. ಈ ಪ್ರದಕ್ಷಿಣಾ ಪ[...] ವನ್ನು ಪೂರ್ವದಲ್ಲಿ ಕತ್ತರಿಸಿ ರಾಮರ್ ಮೇಡೈ [...] ವನ್ನು ಗರ್ಭಗುಡಿಯ ಒಂದಂಗವಾಗಿಸಲಾಯಿ[...] ಎಂದು ಕಾಣುತ್ತದೆ. ಇದು ಪ್ರಾಯಶ ೧೨[...] - ೧೨೬೫ ರಲ್ಲಿ ನಡೆದಿರಬಹುದು. ಇದರಿಂದ[...] ಮುಕ್ಕೋಟಿ ಪ್ರದಕ್ಷಿಣೆ ಮೂರುಕಡೆಯ ಪ್ರದಕ್ಷಿ[...] ವಾಯಿತು. ರಾಮರ್ ಮೇಡೈಯ ಎರಡೂ ಬ[...] ಲಿಗೆ ಎರಡು ಜಗಲಿಗಳಿದ್ದು ಅಂಗದ ಹನುಮಂ[...] ಕಂಚಿನ ವಿಗ್ರಹಗಳನ್ನು ಇಡಲಾಗಿದೆ.

## ಗರ್ಭಗೃಹ

ಗರ್ಭಗೃಹದ ಸುತ್ತಲೂ ಮುಕ್ಕೋಟಿ ಪ್ರದಕ್ಷಿ[...] ಯಿದೆ. ಗರ್ಭಗೃಹದ ಮುಂದೆ ಮುಖ ಮಂಟ[...] ವಾಗಿ ಸಾಯಣಮಂಟಪವಿದೆ. ಮುಕ್ಕೋಟಿ ಪ್ರ[...] ಣೆಯನ್ನು ವೈಕುಂಠ ಏಕಾದಶಿಯಂದು ಮಾತ್ರ [...] ಯುವರು. ಇಲ್ಲಿಗೆ ದಕ್ಷಿಣದಿಂದ ಪ್ರವೇಶ. ಪಶ್ಚಿ[...] ಉತ್ತರಗಳಲ್ಲಿ ಸುತ್ತಿ ಹೊರಬರಬೇಕು. ಉತ್ತರ[...] ಪ್ರದಕ್ಷಿಣಾಪಥದಲ್ಲಿ ವಿಶ್ವಕ್ಸೇನರಿಗೆ ಕಿರಿದಾದ ಒಂ[...] ಗುಡಿಯಿದೆ. ಈ ಕಿರುಗುಡಿಯ ಉಲ್ಲೇಖ ಕ್ರಿ[...] ೧೪೯೧ ರ ಶಾಸನದಲ್ಲೂ ಬಂದಿದೆ.





# ವೇದಪುರುಷ ವೆಂಕಟರಮಣ

ತಮಿಳು ಮೂಲ : ಆರ್. ಕಣ್ಣನ್‌ಸ್ವಾಮಿ.
ಅನುವಾದ : ವಿದ್ವಾನ್ ಕಸ್ತೂರಿ ರಂಗರಾಜನ್.

ಅನಾದಿಯಾದ ನಮ್ಮ ವೈದಿಕ ಮತದಲ್ಲಿ ಪ್ರಬಲವಾದ ಪ್ರಮಾಣವಾಗಿ ಪ್ರಕಾಶಿಸುವುದು ವೇದವೇ ಆಗುವುದು. "ವೇದೈಶ್ಚ ಸರ್ವೈಃ ಅಹಮೇವ ವೇದ್ಯಃ" ಎಂಬ ಭಗವದ್ಗೀತಾ ವಾಕ್ಯದಂತೆ ಸಕಲ ವೇದಗಳಿಂದಲೂ ಪ್ರಕಾಶಿಸಲ್ಪಡುವ ಪರವಸ್ತು ಶ್ರೀಮನ್ನಾರಾಯಣನೇ ಆಗುವನು. ಅವನ ಸ್ವರೂಪಗಳು ಐದು ವಿಧವೆಂದು ವೇದಗಳು ಸಾರುತ್ತವೆ.

ಅಂಭಸ್ಯಪಾರೇ ಭುವನಸ್ಯ ಮಧ್ಯೇ
ನಾಕಸ್ಯ ಪೃಷ್ಠೇ ಮಹತೋ ಮಹೀಯಾನ್
ಶುಕ್ರೇಣ ಜ್ಯೋತೀಗುಷಿ ಸಮನು ಪ್ರವಿಷ್ಟಃ
ಪ್ರಜಾಪತಿಶ್ಚರತಿ ಗರ್ಭೇ ಅಂತಃ"

ಎಂದು ತೈತ್ತಿರೀಯೋಪನಿಷತ್ತಿನ ಎರಡನೆಯ ಪ್ರಶ್ನೆಯ ಪ್ರಾರಂಭದಲ್ಲಿ ಭಗವತ್ ಸ್ವರೂಪವು ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚಾ ಎಂದು ಐದು ವಿಧವಾಗಿ ಹೇಳಲ್ಪಟ್ಟಿವೆ.

ಶ್ರೀದೇವಿ, ಭೂದೇವಿ, ನೀಳಾದೇವಿ ಸಮೇತನಾಗಿ ಅನಂತ ಗರುಡ ವಿಶ್ವಕ್ಸೇನರು ಮೊದಲಾದ ನಿತ್ಯಸೂರಿಗಳ ಪರಿವಾರದೊಂದಿಗೆ ಶ್ರೀವೈಕುಂಠ ಲೋಕದಲ್ಲಿ ಅಲಂಕರಿಸಿರುವ ಪರಮನ ಸಾನ್ನಿಧ್ಯವನ್ನು "ಪರತ್ವ"ವೆನ್ನುವರು. ಕ್ಷೀರಸಾಗರದಲ್ಲಿ ನಾಗಪರ್ಯಂಕನಾಗಿ ಪವಡಿಸಿರುವ ದೇವನ ಸ್ಥಿತಿಯನ್ನು "ವ್ಯೂಹ"ವೆನ್ನುವರು. ಕಣ್ಣಿಂದ ಕಾಣಲಾಗದ ಶ್ರೀಶನು ಎಲ್ಲರ ಕಣ್ಣಿಗೂ ಕಾಣುವಂತೆ ಮಾನುಷರೂಪಿಯಾಗಿ ಶ್ರೀರಾಮನಾಗಿಯೂ ಶ್ರೀಕೃಷ್ಣನಾಗಿಯೂ ಬಂದು ಅವತರಿಸಿದ ಸ್ಥಿತಿಯನ್ನು "ವಿಭವ"ವೆನ್ನುವರು. ಹಾಲಲ್ಲಿರುವ ಬೆಣ್ಣೆಯಂತೆ ಲೋಕದಲ್ಲೆಲ್ಲಾ ಸರ್ವವ್ಯಾಪಿಯಾಗಿ ಇರುವ ಸ್ಥಿತಿಯನ್ನು "ಅಂತರ್ಯಾಮಿತ್ವ"ವೆನ್ನುವರು. ಭೂಲೋಕದಲ್ಲಿ ಶ್ರೀರಂಗ, ತಿರುಪತಿ ಮೊದಲಾದ ಕ್ಷೇತ್ರಗಳಲ್ಲಿ ಅರ್ಚಾಮೂರ್ತಿಯಾಗಿ ವಿಗ್ರಹರೂಪಿಯಾಗಿ ಸೇವೆ ಕೊಡುವ ಸ್ಥಿತಿಯನ್ನು "ಅರ್ಚಾವತಾರ"ವೆನ್ನುವರು.

ತಮಿಳು ವೇದಪುರುಷರೆಂದು ಪ್ರಸಿದ್ಧರಾದ ನಮ್ಮಾಳ್ವಾರರೂ--

ವಿಣ್‌ಮಿಾದಿರುಪ್ಪಾಯ್
ಮಲೈಮೇಲ್ ನಿರ್ಪಾಯ್
ಕಡಲ್ ಚೇರ್ಪಾಯ್
ಮಣ್ ಮಿಾದುಳಲ್ವಾಯ್
ಇವಟ್ರುಳ್ ಎಂಗುಂ ಮರೈಂದುರೈಪ್ಪಾಯ್

ಎಂದು ಈ ಐದು ಸ್ಥಿತಿಯನ್ನು ತಮ್ಮ ತಿರುವಾಯ್‌ಮೊಳಿ ದಿವ್ಯಪ್ರಬಂಧದಲ್ಲಿ ಸ್ತುತಿಸಿದ್ದಾರೆ.

ಮನುಷ್ಯರುಗಳು ಸಕಲರೂ ಆಶ್ರಯಿಸಲು ಅನುಗುಣವಾಗುವಂತೆ ಅರ್ಚಾವತಾರ ರೂಪವಾಗಿ ಪ್ರತಿಷ್ಠಿತವಾಗಿರುವ ದಿವ್ಯದೇಶಗಳೇ ನಮಗೆ ಶ್ಲಾಘ್ಯವಾದವುಗಳು. ಆಳ್ವಾರರುಗಳೆಲ್ಲರೂ ಈ ಅರ್ಚಾವತಾರ ರೂಪಿಯಾದ ಭಗವಂತನನ್ನು ತಮ್ಮ ಪ್ರಬಂಧಗಳಲ್ಲಿ ಹಾಡಿ ಪರವಶರಾಗಿದ್ದಾರೆ. ಭಗವಂತನು ಅರ್ಚಾಮೂರ್ತಿಯಾಗಿ ಬಿಜಯಮಾಡಿಸಿರುವ ದಿವ್ಯದೇಶಗಳು ೧೦೮ ಎಂದು ಪ್ರಸಿದ್ಧ. ಅವುಗಳಲ್ಲಿಯೂ ವಿಶೇಷತೆಯನ್ನು ಪಡೆದಿರುವ ಸ್ವಯಂ ವ್ಯಕ್ತವಾದ ಕ್ಷೇತ್ರಗಳು ಎಂದು ಪ್ರಾಶಸ್ತ್ಯ ಪಡೆದವು ಎಂಟು ಸ್ಥಳಗಳಾಗುವುವು.

ಆದ್ಯಂ ರಂಗಂ ಇತಿ ಪ್ರೋಕ್ತಂ
ವಿಮಾನಂ ರಂಗ ಸಂಜ್ಞಕಮ್
ಶ್ರೀಮುಷ್ಣಂ ವೆಂಕಟಾದ್ರಿಶ್ಚ
ಸಾಲಗ್ರಾಮಂ ಚ ನೈಮಿಶಮ್
ತೋತಾದ್ರೀ ಪುಷ್ಕರಂ ಚೈವ
ನರನಾರಾಯಣಾಶ್ರಮಮ್
ಅಷ್ಟೌಮೇ ಮೂರ್ತಯಃ
ಸಂತಿ ಸ್ವಯಂ ವ್ಯಕ್ತಾ ಮಹೀತಲೇ

ಎಂದು. ಶ್ರೀರಂಗ, ಶ್ರೀಮುಷ್ಣಂ, ತಿರುಮಲೆ, ಸಾಲಗ್ರಾಮ, ನೈಮಿಶಾರಣ್ಯ, ವಾನಮಾಮಲೆ, ಪುಷ್ಕರ, ಮತ್ತು ಬದರಿಕಾಶ್ರಮ ಎಂಬ ಈ ಎಂಟು ಕ್ಷೇತ್ರಗಳೂ ಯಾರಿಂದಲೂ ಸ್ಥಾಪಿಸಲ್ಪಡದೇ ಸ್ವಯಂ ವ್ಯಕ್ತವಾದ ಕ್ಷೇತ್ರಗಳಾಗುವುವು. ಈ ಎಂಟು ಕ್ಷೇತ್ರಗಳಲ್ಲಿಯೂ ತಿರುಮಲೆಗೆ ಸಮನಾದುದು ಬೇರಿಲ್ಲ.

ವೇಂಕಟಾದ್ರಿ ಸಮಂ ಸ್ಥಾನಂ
ಬ್ರಹ್ಮಾಂಡೇ ನಾಸ್ತಿ ಕಿಂಚನ
ವೆಂಕಟೇಶ ಸಮೋ ದೇವೋ
ನ ಭೂತೋ ನ ಭವಿಷ್ಯತಿ

ಎಂದು ಪುರಾಣಗಳೆಲ್ಲವೂ ಏಕರೂಪವಾಗಿ ಘೋಷಿಸಿವೆ. ಇಂತಹ ವೆಂಕಟೇಶನ ಹಿರಿಮೆಯನ್ನು ಯಜುರ್ವೇದದ ಮೂಲಕವೂ ಋಗ್ವೇದದ ಮೂಲಕವೂ ಈಗ ತಿಳಿಯಲೆತ್ನಿಸೋಣ.

"ಓಂ ಯಜ್ಞೋದೇವೇಭ್ಯೋ ನಿಲಾಯತ ವಿಷ್ಣೋ ರೂಪಂ ಕೃತ್ವಾಸಪೃಥಿವೀಂ ಪ್ರಾವಿಶತ್ತಂ ದೇವಾ ಹಸ್ತಾಸ್ಸಂಗಂ ರಭ್ಯೈ ಚ್ಛನ್ತಮಿನ್ದ್ರ ಉ ಪರ್ಯುಕ್ರ ಪರ್ಯತ್ಯ ಕ್ರಾಮಥ್ಸೋಽ ಬ್ರವೀತ್ಕೋ ಮಾಽಯಮು ಪರ್ಯುಪರ್ಯತ್ಯ ಕ್ರಮಿಾದಿತ್ಯಹಂ ದುರ್ಗೇ ಹನ್ತೇತ್ಯಥಕಸ್ತ್ವ ಮಿತ್ಯಹಂ ದುರ್ಗಾದಾಹರ್ತೆತಿ ಸೋಽಬ್ರವಿದ್ದುರ್ಗೇವೈ ಹನ್ತಾವೋಚಥಾ ವರಾಹೋಽಯಂ ವಾಮಮೋಷಃ

ಸಪ್ತಾನಾಂ ಗಿರೀಣಾಂ ಪರಸ್ತಾದ್ವಿತ್ತಂ ವೇದ್ಯಮಸುರಾಣಾಂ ಬಿಭರ್ತಿತಂ ಓಹಿಯದಿ ದುರ್ಗೇಹನ್ತಾಽಸೀತಿ ಸದರ್ಭ ಪುಞ್ಜೀಲಮುದ್ವೃಹ್ಯ ಸಪ್ತಗಿರೀನ್ಭಿತ್ವಾ ತಮಹನ್ಸೋಽ ಬ್ರವೀದ್ದುರ್ಗಾ ದ್ವಾ ಆಹರ್ತಾಽ ವೋಚಥಾ ಏತಮಾಹರೇತಿ ತಮೇ ಭ್ಯೋ ಯಜ್ಞ ಏವ ಯಜ್ಞ ಮಾಽಹರದ್ಯತ್ತದ್ವಿತ್ತಂ ವೇದ್ಯ ಮಸುರಾಣಾಮವಿನ್ದನ್ತ ತದೇಕಂ ವೇದ್ಯೈ ವೇದಿತ್ವ ಮಸುರಾಣಾಮ್ ವಾ ಇಯಮಗ್ರ ಆಸೀದ್ಯಾವದಾನಸೀನಃ ಪರಾಪಶ್ಯತಿ ತಾವದ್ದೇವಾನಾಂ ತೇ ದೇವಾ ಅಬ್ರುವನ್......."

ಯಜುಸ್ಸಂಹಿತೆ ೬-೨-೪

ಕರುಣಾಮೂರ್ತಿಯಾದ ಶ್ರೀಮನ್ನಾರಾಯಣನು ಈ ಮರ್ತ್ಯಲೋಕದಲ್ಲಿ ಬಾಳುವ ಮನುಷ್ಯಕುಲವೆಲ್ಲವೂ ಐಹಿಕ ಸಂಪತ್ತನ್ನೂ ಆಮುಷ್ಮಿಕ ಸೌಭಾಗ್ಯವನ್ನೂ ಪಡೆದು ಸುಖ ಸಂತೋಷದಿಂದ ಬಾಳಬೇಕೆಂದು ಸಂಕಲ್ಪಿಸಿಕೊಂಡನು. ಅದಕ್ಕಾಗಿ ಯಜ್ಞಸ್ವರೂಪನಾದ ಭಗವಂತನು ವಿಷ್ಣುವಿನ ರೂಪ ತಳೆದು ಯಾಗಗಳಿಗಾಗಿ ಏರ್ಪಟ್ಟ ಎಂಟು ರೀತಿಯ ವಸ್ತುಗಳನ್ನು ದೇವತೆಗಳ ಕಣ್ಣಿಗೆ ಕಾಣದಂತೆ ಮರೆಸಿಕೊಂಡು ಭೂಲೋಕಕ್ಕೆ ಬಂದನು. ಅದನ್ನು ತಿಳಿದ ದೇವತೆಗಳು, ಭೂಲೋಕದವರು ಸಕಲ ಸಂಪತ್ತುಳ್ಳವರಾದರೆ ನಮ್ಮ ಕೈಯನ್ನು ಎದುರು ನೋಡರು, ನಮ್ಮನ್ನು ಲಕ್ಷಿಸಿಯೂ ನೋಡರು --ಎಂದು ಅಸೂಯಾಪರರಾದರು. ಯಾಗವಸ್ತುಗಳನ್ನು ಹೊತ್ತುಕೊಂಡು ಭೂಲೋಕದೆಡೆಗೆ ಹೋಗುತ್ತಿರುವ ವಿಷ್ಣುವನ್ನು ಹೋಗಲು ಬಿಡದೆ ಎಲ್ಲಾ ದೇವತೆಗಳೂ ಕೈಗೆ ಕೈಸೇರಿಸಿಕೊಂಡು ಮಧ್ಯದಲ್ಲಿ ಅಡ್ಡ ಹಾಕಿ ತಡೆದರು. ಆ ದೇವನನ್ನು ಇಂದ್ರನು ಮೇಲೆ ಮೇಲೆ ಬಾರಿ ಬಾರಿಯಾಗಿ ಆಕ್ರಮಿಸುತ್ತ ಮುಂದಕ್ಕೆ ಹೋಗಲು ಬಿಡದೆ ತಡೆದನು. ಆಗ ವಿಷ್ಣುವು ಇಂದ್ರನನ್ನು ನೋಡಿ -- "ಯಾರು ನೀನು? ನನ್ನನ್ನು ಹೋಗಲು ಬಿಡದೆ ಮೇಲೆ ಮೇಲೆ ಬಿದ್ದು ತಡೆಯುವೆಯೇಕೆ?" ಎಂದು ಕೇಳಿದನು. ಅದಕ್ಕೆ ಇಂದ್ರನು "ಎಂತಹ ಹೋಗಲಾ

ಗದ ಸ್ಥಳಕ್ಕೆ ಹೋದರೂ ನನ್ನ ವಿರೋಧಿಯನ್ನು ಬಿಡದೇ ಅಟ್ಟಿಸಿಕೊಂಡು ಹೋಗಿ ಕೊಲ್ಲುವಂತಹವನು ನಾನು" ಎಂದನು. ಅದನ್ನು ಕೇಳಿದ ವಿಷ್ಣುವು ನಾನು ಎಂತಹ ಕಠಿಣವಾದ ಪ್ರದೇಶವಾದರೂ ಹೋಗಿ ವಿರೋಧಿಗಳಿಂದ ನನ್ನ ವಸ್ತುಗಳನ್ನು ಕಾಪಾಡಿಕೊಂಡು ಬರುವೆನು" ಎನ್ನುವನು. ಅದಕ್ಕೆ ಇಂದ್ರನು "ನೀನು ಎಂತಹ ಜಟಿಲವಾದ ದಾರಿಯಲ್ಲಿ ಹೋದರೂ ನಿನ್ನನ್ನು ಅನುಸರಿಸಿಕೊಡು ಬಂದು ನಿನ್ನನ್ನು ತಡೆಯುವೆ" ಎನ್ನುವನು. ನಂತರ ವಿಷ್ಣುವು ವರಾಹರೂಪ ತಳೆದು ಯಾಗವಸ್ತುಗಳೆಲ್ಲವನ್ನೂ ಯಾರಿಗೂ ಕಾಣದಂತೆ ಮರೆಮಾಡಿಕೊಂಡನು. "ದೀಕ್ಷಣೀಯ"ವೆಂದು ಹೇಳಲ್ಪಡುವ ನಾಲ್ಕುವಸ್ತುಗಳು ಮತ್ತು "ಉಪಸದ" ವೆನ್ನಲ್ಪಡುವ ಮೂರು ವಸ್ತುಗಳು ಸೇರಿ ಒಟ್ಟು ಏಳು ಯಾಗವಸ್ತುಗಳನ್ನು ಸಪ್ತಗಿರಿಗಳಾಗಿ ಮಾಡಿಬಿಟ್ಟನು. ತೂಗು ದೀಪದೋಪಾದಿಯಲ್ಲಿರುವ "ಶಮಸಾ" ಪಾತ್ರೆಯ ರೂಪದಲ್ಲಿ ಅನಂತ ಐಶ್ವರ್ಯಗಳೆಲ್ಲವನ್ನೂ ಕೈಯಲ್ಲಿಟ್ಟುಕೊಂಡು ಮರೆಸಿಕೊಂಡು ಬಿಟ್ಟನು. ಅಂತಹ ಭಗವಂತನೇ ಏಳು ದೆಟ್ಟದೊಡೆಯನಾಗಿ, ಶ್ರೀನಿವಾಸನಾಗಿ ಬೇಡಿದವರಿಗೆ ಸಕಲ ಸಂಪದವನ್ನೂ ಕರುಣಿಸುತ್ತಾ ಪ್ರತ್ಯಕ್ಷ ದೈವವಾಗಿ ಇಂದಿಗೂ ಪ್ರಕಾಶಿಸುತ್ತಿರುವನು.

"ಪಾಗಂ ಸುರ ಇರಾವತೀ ಧೇನು
ಮತೀ ಹಿ ಭೂತಗಂ ಸೂಯವಸಿನೀ
ಮನವೇ ಯಶಸ್ಯೆ ವ್ಯಸ್ಕಭ್ನಾದ್ದೋದಸೀ
ವಿಷ್ಣು ರೆತೆ ದಾಧಾರ ಪೃಥಿವೀ ಮಭಿತೊ
ಮಯೂಖ್ಯೆಃ ಪ್ರಾಚೀಪ್ರೇತ ಮದ್ವರಂ ಕಲ್ಪ
ಯನ್ತೀಊರ್ಧ್ವಂ ಯಜ್ಞಂ ನಯತಂ
ಮಾಜಿಪ್ವರತ ಮತ್ರರಮೇಧಾಂ ವರ್ಷ್ಮಸ್ಸು
ಥಿವ್ಯಾ ದಿವೋವಾ ವಿಷ್ಣು ವ್ರತವಾ
ಪೃಥಿವ್ಯಾ ಮಹೋವಾ ವಿಷ್ಣವ್ರತವಾಽನ್ತರಿ
ಕ್ಷಾದ್ಧಸ್ತೌ ಪೃಣಸ್ವ ಬಹುಭಿರ್ವಸವ್ಯೈರಾಪ್ರ
ಯಚ್ಛ ದಕ್ಷಿಣಾದೋತಸವ್ಯಾತ್"

ಶ್ರೀನಿವಾಸದೇವರು ತನ್ನನ್ನರಸಿ ಬಂದ ಭಕ್ತರಿಗೆ ಬೇಡಿದೆಲ್ಲವನ್ನೂ ಸಕಲ ಸಂಪತ್ತನ್ನನೂ ಕರುಣಿಸುವನು ಎಂದು ಯಜುರ್ವೇದವು ಹೇಳುವುದು.

ಹೇ ವಿಷ್ಣುವೇ! ನೀನು ಆಕಾಶಲೋಕದಿಂದಲೂ ಭೂಲೋಕದಿಂದಲೂ ಮಹರ್ಲೋಕದಿಂದಲೂ ಅಂತರಿಕ್ಷಲೋಕದಿಂದಲೂ ತಂದ ಅನಂತವಾದ ಐಶ್ವರ್ಯಗಳಿಂದ ನಿನ್ನ ಕೈಗಳನ್ನು ತುಂಬಿಕೊಳ್ಳುವನಾಗು, ಅವೆಲ್ಲವನ್ನೂ ಮೇಲೆ ಮೇಲೆ ಅಭಿವೃದ್ಧಿಪಡಿಸಿ ಅಪೂರ್ವವಾದ ಮುತ್ತು ರತ್ನಗಳನ್ನೂ ಮರಕತ, ಮಾಣಿಕ್ಯಗಳನ್ನೂ ವಜ್ರವೈಢೂರ್ಯಗಳನ್ನೂ ಬಲಗೈಯಿಂದಲೂ ಎಡಗೈಯಿಂದಲೂ ತುಂಬ ತುಂಬ ಬಾಚಬಾಚ ಕೊಡುವಂತಹವನಾಗು. ಮೂರನೆಯದಾಗಿ--

ಶ್ರೀ ವೇಂಕಟೇಶನ ಸನ್ನಿಧಿಯಲ್ಲಿ ಯಾರು ಯಾರು, ಯಾವ ಯಾವ ಪ್ರಾರ್ಥನೆಯನ್ನು ಮಾಡಿಕೊಂಡರೂ ಆ ಪ್ರಾರ್ಥನೆಗಳೆಲ್ಲವನ್ನೂ ನೆರವೇರಿಸಿ ಕೊಡುವನು ಎನ್ನುವುದು ಋಗ್ವೇದ--

ಅರಾಯಿ ಕಾಣೇ ವಿಕಟೇ
ಗಿರಿಂ ಗಚ್ಛ ಸದಾನ್ವೇ
ಶಿರಿಂ ಬಿಠಸ್ಯ ಸತ್ವಭಿಃ
ತೇ ಭಿಷ್ಟಾ ಜಾತಯಾಮಸಿ
(ಋಗ್ವೇದ ಅಷ್ಟಕ ೮ ಅಧ್ಯಾಯ ೮ ವರ್ಗ ೧೩ ಋಕ್-೧)

ಹೇ ಮನುಜಾ! ನೀನು ಹಣಕಾಸು ಇಲ್ಲದವನಾಗಿ, ಹೊಸದಾಗಿ ಐಶ್ವರ್ಯವನ್ನು ಹೊಂದಲಪೇಕ್ಷಿಸಿದವನಾಗಿ, ಕಳೆದುಕೊಂಡ ಐಶ್ವರ್ಯವನ್ನು ಪುನಃ ಪಡೆಯಲುತ್ಸುಕನಾಗಿ, ಊನಕಣ್ಣೋ ಜ್ಞಾನಕಣ್ಣೋ ಇಲ್ಲದವನಾಗಿ ಇದ್ದರೂ ಹಲವಾರು ವಿಧವಾದ ಕಷ್ಟಕಾರ್ಪಣ್ಯಗಳ ಬಿಡುಗಡೆ ಹೊಂದದವನಾಗಿ, ಆಧ್ಯಾತ್ಮಿಕ ಆದಿಭೌತಿಕ ಆದಿದೈವಿಕಾದಿ ತಾಪತ್ರಯದಿಂದ ವಿದೂರನಾಗದೇ ಇದ್ದರೂ, ಧರ್ಮಾರ್ಥ ಕಾಮಮೋಕ್ಷಗಳಾದ ಪುರುಷಾರ್ಥಗಳನ್ನು ಹೊಂದಲಾಗದಂತೆ ತಡೆಯಲಾಗದವನಾಗಿ ಇದ್ದರೂ, ಶ್ರೀನಿವಾಸದೇವರ ಭಕ್ತರುಗಳನ್ನು ಮುಂದಿಟ್ಟುಕೊಂಡು ಶ್ರೀನಿವಾಸನ ತಿರುಮಲೆಗೆ ಹೋಗುವಂತಹನಾಗು. ಅವನ ಭಕ್ತರುಗಳನ್ನು ಮುಂದಿಟ್ಟುಕೊಂಡು ಆ ದೇವರಲ್ಲಿ ಕಷ್ಟಕೋಟಲೆಗಳನ್ನು ನೀಗಿಸಿ ಸುಖಸಂಪದಗಳನ್ನು ಕರುಣಿಸಲು ನೀನು ಪ್ರಾರ್ಥನೆಯನ್ನು ಮಾಡಿಕೊಳ್ಳುವಂತಹವನಾಗು, ಆ ದೇವನ ಸನ್ನಿಧಿಯಲ್ಲಿ ನಿನ್ನನ್ನು ಸಮರ್ಪಿಸಿಕೊಳ್ಳುವಂತಹವನಾಗು,

ಮೇಲ್ಕಂಡ ಋಗ್ವೇದ ಮಂತ್ರದ ವಿವರಣೆಯು ತಿರುಮಲೇಶನಿಗೇ ನಿರ್ದೇಶಿಸಿದುದೆಂದು ಭವಿಷ್ಯತ್ ಪುರಾಣದಲ್ಲಿ --

"ಅರಾಯಿಕಾಣೇ ವಿಕಟೇ ಗಿರಿಂ
ಗಚ್ಛೇತಿ ತಂ ವಿದುಃ ಏವಂ ವೇದಮಯಃ
ಸಾಕ್ಷಾತ್ ಗಿರೀಂದ್ರಃ ಪನ್ನಗಾಚಲಃ
(೪-೨೧)

ಎಂದು ದೃಢಪಡಿಸಿದೆ.

ಈ ರೀತಿಯಾಗಿ, ಯಜ್ಞಸ್ವರೂಪಿಯಾದ ಮಹಾವಿಷ್ಣುವು ಈ ಮರ್ತ್ಯಲೋಕದಲ್ಲಿರುವ ಸರ್ವ ಜನತೆಯೂ ಸಕಲೈಶ್ವರ್ಯದೊಂದಿಗೆ ಸುಖ ಸಂತೋಷದಿಂದ ಬಾಳ್ವೆ ನಡೆಸುವಂತೆ ಮಾಡುವುದಕ್ಕಾಗಿ ತಿರುಮಲೆಯಲ್ಲಿ ಶ್ರೀನಿವಾಸನಾಗಿ ನಿಂತು ಅನುಗ್ರಹಿಸುತ್ತಿರುವನೆಂದೂ, ಆ ದೇವನು ಎಲ್ಲಾ ಲೋಕಗಳಲ್ಲಿರುವ ಸಂಪತ್ತನ್ನೂ ತಂದು ಕೈಯಲ್ಲಿ ತುಂಬಿಕೊಂಡು ಅದನ್ನು ಒಂದಕ್ಕೆ ಹತ್ತಾಗಿ ಅಭಿವೃದ್ಧಿಪಡಿಸಿ ಬಲಗೈಯಿಂದಲೂ ಎಡಗೈಯಿಂದಲೂ ತನ್ನನ್ನರಸಿ ಬಂದ ಭಕ್ತರಿಗೆ ಬೆಳ್ಳಿ ಬಂಗಾರ ಮುತ್ತು ರತ್ನಾದಿಗಳನ್ನು ತುಂಬಿ ತುಂಬಿ ಕೊಡುವನು ಎಂದೂ ಯಜುರ್ವೇದದಲ್ಲಿ ಹೇಳಲ್ಪಟ್ಟಿದೆ. ಅಂತೆಯೇ ತಿರುಮಲೇಶನ ಭಕ್ತರನ್ನು ಮುಂದಿಟ್ಟುಕೊಂಡು ಭಕ್ತರು ಆರ್ತರಾಗಿ, ಯಾರು ಯಾರು ಏನನ್ನು ಬೇಡುವರೋ ಅವೆಲ್ಲವನ್ನೂ ಶ್ರೀನಿವಾಸನು ಕೃಪಾಕಟಾಕ್ಷ ಹೊಂದಿ ಅನುಗ್ರಹಿಸುವನು ಎನ್ನುವುದು ಋಗ್ವೇದ.

ಋಗ್ವೇದ - ಯಜುರ್ವೇದಗಳಲ್ಲಿನ ಈ ಮೇಲಿನ ಅಭಿಮತವನ್ನು ವೇದೋಪನಿಷತ್ತಿನ ಸಾರಭೂತವಾದ ಭಗವದ್ಗೀತೆಯಲ್ಲಿ ಗೀತಾಚಾರ್ಯನು--

ಚತುರ್ವಿಧಾ ಭಜಂತೇ ಮಾಂ
ಜನಾಃ ಸುಕೃತಿನೋಽರ್ಜುನ
ಆರ್ತೋ ಜಿಜ್ಞಾಸು ರರ್ಥಾರ್ಥೀ
ಜ್ಞಾನೀ ಚ ಭರತರ್ಷಭ
ತೇಷಾಂ ಜ್ಞಾನೀ ನಿತ್ಯಯುಕ್ತಃ
ಏಕ ಭಕ್ತಿರ್ವಿಶಿಷ್ಯತೇ
ಪ್ರಿಯೋಹಿ ಜ್ಞಾನಿನೋಽತ್ಯರ್ಥಂ
ಅಹಂ ಸ ಚ ಮಮ ಪ್ರಿಯಃ

ಸಮಸ್ತ ಭಕ್ತರೆಲ್ಲರನ್ನೂ ನಾಲ್ಕು ವಿಧವಾಗಿ ವಿಂಗಡಿಸಿದ್ದಾನೆ. ಗೀತೆಯ ಈ ಅಭಿಪ್ರಾಯವೇ ಸ್ಪಂದಿಸುವಂತೆ ಅರ್ತಿ ಅರ್ಥಾರ್ಥಿಯನ್ನು ಒಟ್ಟಿಗೆ ಸೇರಿಸಿ ಒಟ್ಟು ಭಕ್ತರನ್ನು ವಿಂಗಡಿಸಿ ಪೊಯ್‌ಗೈ ಆಳ್ವಾರರು ತಮ್ಮ ಮುದಲ್ ತಿರುವಂದಾದಿಯಲ್ಲಿ

ಏಳುವಾರ್ ವಿಡೈಕೊಳ್ವಾರ್
ಈನ್‌ತುಳಾಯಾನೈ
ಏಳುವಾ ವಗೈ ನಿನೈಂದು
ವೈಕಲ್ ತೊಳುವಾರ್
ವಿನೈಚ್ಚುಡರೈನಂದುವಿಕ್ಕುಂ
ವೇಂಗಡಮೇ ವಾನೋರ್
ಮನಚ್ಚುಡರೈ ತೂಂಡುಂ ಮಲೈ

-ಎಂದು ಹಾಡಿದ್ದಾರೆ.

ಆದ್ದರಿಂದ ವೇದದಲ್ಲಿ ಪ್ರತಿಪಾದ್ಯನೂ, ವೇದಮಹಿಮನೂ ಆದ ಶ್ರೀ ವೆಂಕಟೇಶನಲ್ಲಿ ಶಿರಬಾಗಿ ಬೇಡಿ, ಸಕಲಾಭೀಷ್ಟವನ್ನು ಪಡೆದು, ಸುಖಬಾಳ್ವೆಯನ್ನು ನಡೆಸುವಿರಾಗಿರಿ ಎಂಬುದೇ ಈ ದಾಸನ ಹರಕೆ -- ಹಾರೈಕೆ.



# ಗರ್ಭಗುಡಿಯಲ್ಲಿನ ಇತರ ವಿಗ್ರಹಗಳು

—ಆಂಗ್ಲಮೂಲ (ದಿ ತಿರುಮಲ ಟೆಂಪಲ್) ---**ಎನ್. ರಮೇಶನ್**, ಐ.ಎ.ಎಸ್.

## ಭೋಗಶ್ರೀನಿವಾಸ

ಈ ವಿಗ್ರಹ ಬೆಳ್ಳಿಯದಾಗಿದ್ದು ಕ್ರಿ.ಶ. ೯೬೬ ರಲ್ಲಿ ಪಲ್ಲವ ರಾಣಿ ಸಾಮವೈ ನೀಡಿದುದಾಗಿದೆ. ದೇವಾಲಯದ ಉತ್ತರ ಪ್ರಾಕಾರದ ಗೋಡೆಯ ಮೇಲಿನ ತಿರುಮಲೆಯ ಆಲಯದ ಅತಿ ಪ್ರಾಚೀನ ಶಾಸನದಲ್ಲಿ ಈ ವಿಷಯ ಉಕ್ತವಾಗಿದೆ. ಈ ಶಾಸನವು ಕಾಡವನ್ ಪೆರುಂದೇವಿ ಎಂದು ಹೆಸರಾಗಿದ್ದ ಆಕೆ ತನ್ನ ಪತಿ ಹಾಗೂ ದೊರೆ ಕೊಪ್ಪಾಟ್ರ ಮಹೇಂದ್ರ ಪೆನ್ಮಾರ್‌ನ ಆಳ್ವಿಕೆಯ ಹದಿನಾಲ್ಕನೆಯ ವರ್ಷದಲ್ಲಿ ಪ್ರತಿ ದಿನದ ನೈವೇದ್ಯಕ್ಕಾಗಿ ನಾಲ್ಕು ನಾಳಿ ತಿರುವಮುದಕ್ಕೆಂದೂ, ನಂದಾದೀಪಕ್ಕಾಗಿಯೂ, ಎರಡು ಆಯನ ಸಂಕ್ರಾಂತಿಗಳಲ್ಲಿ ಹಾಗೂ ಎರಡು ವಿಷ್ಣು ಸಂಕ್ರಾಂತಿಗಳಲ್ಲಿ ತಿರುಮಂಜನಕ್ಕಾಗಿಯೂ, ಮತ್ತು ಪುರಟ್ಟಾಸಿಯ ಒಂಭತ್ತು ದಿನದ ಉತ್ಸವದ ಮೊದಲ ಎರಡು ದಿನಗಳ ಉತ್ಸವಕ್ಕಾಗಿಯೂ, ಈ ವಿಗ್ರಹವನ್ನು ಪವಿತ್ರವಾದ ವೆಂಕಟನಗದ ತಿರುವಿಳಂ ಕೋಯಿಲ್ (ತಿರುಮಲೆಯ ಆಲಯದಲ್ಲಿ ಗರ್ಭಗೃಹವನ್ನು ಅಂದು ಹೆಸರಿಸಿದ ರೀತಿ) ನಲ್ಲಿಪ್ರತಿಷ್ಠಾಪಿಸಿದುದಾಗಿ ತಿಳಿಸುತ್ತದೆ. ಆಕೆ ೪೬ ಕಳಂಜುಗಳ ಸ್ವರ್ಣಾಭರಣಗಳನ್ನೂ ಜೊತೆಗೇ ನೀಡಿದ್ದಾಳೆ. ಮಣವಾಳಪ್ಪೆರುಮಾಳ್ ಎಂದು ಹೆಸರಾದ ಕೌತುಕ ಬೇರಕ್ಕೆಂದು ಭೂಮಿಯನ್ನೂ ದತ್ತಿ ಬಿಡಲಾಯಿತು. ಆಲಯದ ಅಧಿಕಾರಿಗಳಿಗೆ (ಮಡಪತ್ಯನ್) ಈ ಸೇವೆಗಳನ್ನು ನಡೆಸಿಕೊಂಡು ಬರಲೂ, ಸಭೈಯಾರರು ದತ್ತಿ ನೀಡಿದ ಭೂಮಿಯು ಕರಮುಕ್ತವಾಗಿರುವಂತೆ ರಕ್ಷಿಸಬೇಕೆಂದೂ ಆಜ್ಞೆ ಮಾಡಲಾಯಿತು.

ಶ್ರೀನಿವಾಸನಿಗೆ ಶಂಖ ಚಕ್ರಗಳು ಶಾಶ್ವತವಾಗಿ ಸೇರಿ ಹೋಗಿರುವುದರ ಹೊರತು, ಕೌತುಕ ಬೇರ ಮೂಲಬೇರದ ಯಥಾವತ್ ಪ್ರತಿ ರೂಪವಾಗಿದೆ. ಕೌತುಕ ಬೇರದ ಪೀಠದಲ್ಲಿ ಪಾದಗಳ ಕೆಳಗೆ ಸಮಕೋನ ತ್ರಿಭುಜಗಳೆರಡು ಒಂದರೊಳಗೊಂದು ಸೇರಿದಂತಿರುವ ಯಂತ್ರವನ್ನು ಕೆತ್ತಲಾಗಿದೆ. ಮೂಲದೇವರ ವಿಗ್ರಹದಲ್ಲೂ ಇಂತಹ ಒಂದು ಯಂತ್ರ ಇದ್ದಿರಬಹುದಾದ ಸಂಭಾವ್ಯತ ಉಂಟು.ನಮ್ಮಾಳ್ವಾರರು ತಮ್ಮ ೩-೪-೪ ನೇ ಪಾಶುರದಲ್ಲಿ ತಿರುವೆಂಗಡಮುಡೈಯಾನನಿಗೆ ಕಾಂತಿ ಹೊರ ಚಿಮ್ಮುವ ಪಾದಗಳಿವೆಯೆಂದು ವರ್ಣಿಸಿದ್ದಾರೆ. ಇದು ಷಡ್ಗುಣಯಂತ್ರವನ್ನು ಪ್ರತಿನಿಧಿಸಿರಬಹುದು. ಮಣವಾಳಪ್ಪೆರುಮಾಳ್ ಪ್ರತಿಮೆಯ ಪ್ರತಿಷ್ಠೆಗಿಂತ ಎರಡು ಶತಮಾನಗಳ ಮೊದಲಿಗೆ ಹಾಡಿದವರು ನಮ್ಮಾಳ್ವಾರರು. ವೈಖಾನಸ ಆಗಮದಲ್ಲಿ ಗುರುತಿಸಲಾಗಿರುವ ವ್ಯೂಹ, ಪರ, ಮೂರ್ತಿಗಳ ಆರು ಗುಣಗಳನ್ನು ಈ ರೀತಿಯ ಯಂತ್ರ ಪ್ರತಿನಿಧಿಸಬಹುದು.

ಭೋಗ ಶ್ರೀನಿವಾಸನಿಗೆ ಪ್ರತಿನಿತ್ಯವೂ ಮಂತ್ರೋಕ್ತ ಅಭಿಷೇಕ ನಡೆಯುವುದು. ಮೂಲಮೂರ್ತಿಗೆ ಶುಕ್ರವಾರಗಳಲ್ಲಿ ಮಾತ್ರವೇ ಅಭಿಷೇಕ.

ರಾತ್ರಿಯ ಹೊತ್ತು ಈ ಮೂರ್ತಿಯನ್ನು ಪರ್ಯಂಕಾಸನದಲ್ಲಿ ಶಯನಗೊಳಿಸಲಾಗುತ್ತದೆ. ಪ್ರತಿ ರಾತ್ರಿ ಏಕಾಂತ ಸೇವೆಯಲ್ಲಿ ಈ ವಿಗ್ರಹವನ್ನು ಸಾಯಣ ಮಂಟಪದ ಉಯ್ಯಾಲೆಯಲ್ಲಿ ಆಸೀನಗೊಳಿಸಿ, ತಾಳ್ಳಪಾಕ ಕವಿಗಳ ಕೀರ್ತನೆಗಳ ಸಂಗೀತದ ಹಿನ್ನೆಲೆಯಲ್ಲಿ ಹಾಲು ನಿವೇದನವಾಗುತ್ತದೆ. ಪ್ರತಿ ರಾತ್ರಿ ಈ ದೇವರಿಗೆ ಗಂಧವನ್ನೂ ಪೂಸಲಾಗುತ್ತದೆ. ಆಲಯದ ಒಂದು ವಿಶೇಷವೆಂದರೆ ಧನುರ್ಮಾಸದ ಹೊರತು ಮಿಕ್ಕ ಎಲ್ಲ ತಿಂಗಳಿನಲ್ಲೂ ಈ ಮೂರ್ತಿಗೆ ಏಕಾಂತಸೇವೆ ನಡೆಯುವುದು. ಧನುರ್ಮಾಸದಲ್ಲಿ ಮಾತ್ರ ಶ್ರೀಕೃಷ್ಣಸ್ವಾಮಿಗೆ ಏಕಾಂತಸೇವೆಯಾಗುವುದು.

ಮೂಲ ಮೂರ್ತಿಯೊಡನೆ ಅತಿ ಸನ್ನಿಹಿತವಾಗಿ ಒಂದು ರೇಷ್ಮೆ ಸೂತ್ರದಿಂದ ಈ ಮೂರ್ತಿಯನ್ನು ಸೇರಿಸಲಾಗಿದೆ. ಉತ್ಸವ ಸಮಯಗಳಲ್ಲಿ ಗರ್ಭಗೃಹದಿಂದ ಈ ವಿಗ್ರಹವನ್ನು ಹೊರತಂದಾಗ ಒಂದು ಸ್ವರ್ಣದ ಕೊಂಡಿಯಿಂದಲೂ ರೇಷ್ಮೆ ಸೂತ್ರದಿಂದಲೂ ಮೂಲವರರೊಡನೆ ಸಂಬಂಧವನ್ನೂ ಸ್ಥಾಪಿಸಲಾಗುತ್ತದೆ.

## ಉಗ್ರ ಶ್ರೀನಿವಾಸ

ಈ ವಿಗ್ರಹವನ್ನು ಪ್ರಾಚೀನಕಾಲದಲ್ಲಿ ವೆಂಕಟತ್ತುರೈವಾರ್ ಎಂದು ಕರೆಯಲಾಗುತ್ತಿತ್ತು. ಉಗ್ರ ಶ್ರೀನಿವಾಸ ದೇವರ ಕೋಪದ ಪ್ರತಿನಿಧಿ. ಧ್ರುವಬೇರದ ಹೊರತು ಪ್ರಾಯಶಃ ಇದೇ ಆಲಯದ ಅತ್ಯಂತ ಪ್ರಾಚೀನ ವಿಗ್ರಹವಾಗಿದ್ದು ಮೊದಲಿಗೆ ಉತ್ಸವ ಮೂರ್ತಿಯಾಗಿ ಬಳಕೆಯಲ್ಲಿರಬೇಕು. ಏಳು ಅಂಗುಲ ಎತ್ತರದ ಪೀಠದ ಮೇಲೆ ಹದಿನೆಂಟು ಅಂಗುಲ ಎತ್ತರಕ್ಕೆ ನಿಂತ ಮೂರ್ತಿ. ಇದರ ಚಕ್ರ ತುಸು ತಿರುಗಿದ್ದು ಪ್ರಾಯಶಃ ಪ್ರಯೋಗಚಕ್ರವಾಗಿದೆ ಎನ್ನಬೇಕು. ನಿಂತ ಭಂಗಿಯಲ್ಲಿನ ಶ್ರೀದೇವಿ ಭೂದೇವಿಯರನ್ನೂ ಕಾಣಬಹುದು. ಭೋಗ ಶ್ರೀನಿವಾಸನ ಪ್ರತಿಷ್ಠೆಯಾಗುವ ಮೊದಲು ಆಲಯದ ಮೂರ್ತಿ ಇದಾಗಿತ್ತು ಎಂಬುದನ್ನು ತಮಿಳಿನ ಸಮಾಸ ಪದ ವೆಂಗಟತ್ತುರೈವಾರ್ ಎಂಬುದು ತಿಳಿಸುತ್ತದೆ. ಈಗ ಮೂರು ಸಂದರ್ಭಗಳಲ್ಲಿ ಉಗ್ರ ಶ್ರೀನಿವಾಸ ಮಾತ್ರವೇ ಇರುವಂತೆ ಇದೆ. ಅವುಗಳೆಂದರೆ ಉತ್ಥಾನ ಏಕಾದಶಿ, ಮುಕ್ಕೋಟಿದ್ವಾದಶಿ, ಹಾಗೂ ದ್ವಾದಶಾರಾಧನೆ. ಪರಂಪರೆಯ ಹೇಳಿಕೆಯಂತೆ ಸೂರ್ಯಕಿರಣಗಳು ಈ ವಿಗ್ರಹವನ್ನು ತಾಕಬಾರದು. ಹಾಗೇನಾದರೂ ತಾಕಿದರೆ ವಿಶ್ವಕ್ಕೇ ಆಪತ್ತುಂಟಾಗುವುದು.

## ಕೊಲುವು ಶ್ರೀನಿವಾಸ

ಪ್ರತಿದಿನ ತೋಮಾಲೆ ಸೇವೆಯಾದ ನಂತರ ತಿರುಮಾಮಣಿ ಮಂಟಪದಲ್ಲಿ ದರ್ಬಾರ್ ನಡೆಯುತ್ತದೆ. ಇದಕ್ಕೆಂದು ಗರ್ಭಗೃಹದಿಂದ ಸ್ವಾಮಿಯನ್ನು ಕರೆತಂದು ಬೆಳ್ಳಿಯ ಸಿಂಹಾಸನದಲ್ಲಿ ಶ್ವೇತಛತ್ರದಡಿಯಲ್ಲಿ ಆಸೀನಗೊಳಿಸಲಾಗುತ್ತದೆ. ಈ ವಿಗ್ರಹವು ಸ್ವಾಮಿಯನ್ನು ಈ ಓಲಗದಲ್ಲಿ (ಕೊಲುವು) ಪ್ರತಿನಿಧಿಸುವುದರಿಂದ ಇದು ಕೊಲುವು ಬೇರವಾಯಿತು. ಆಲಯದ ಮುಖ್ಯ ಸಂರಕ್ಷಕನಾಗಿ, ಆಲಯದ ಎಲ್ಲ ವ್ಯವಹಾರಗಳನ್ನೂ ಗಮನಿಸುತ್ತ, ಆದಾಯ ವೆಚ್ಚಗಳ ಲೆಕ್ಕವನ್ನೂ ತಿಳಿದುಕೊಳ್ಳುತ್ತ ಇರುವ ದೇವರು. ಪ್ರತಿದಿನವೂ ಈ ವಿಗ್ರಹಕ್ಕೆ ಪಂಚಾಂಗ ಪಠನವಾಗಿ, ಇಲ್ಲಿಯೇ ನಿವೇದನೆಯನ್ನದ ಮಂತ್ರದಂಡವನ್ನು ರೂಪಿಸಿ, ಅರ್ಚಕರ ಪಾಲನ್ನು ನಿರ್ಧರಿಸುವುದು. ಬಲಿಬೇರವೆಂದು ಹೆಸರಾಗಿದ್ದರೂ, ನಿತ್ಯ ಪೂಜೆಯ ನಂತರ ಈ ವಿಗ್ರಹವನ್ನು ಎಂದೂ ಆಲಯದ ಹೊರತಂದು ನೈವೇದ್ಯ ನೀಡುವುದಿಲ್ಲ.

## ಮಲೆಯಪ್ಪನ್
## ಅಥವಾ
## ಉತ್ಸವಮೂರ್ತಿ

ಕ್ರಿ.ಶ. ೧೩೩೯ ರ ಶಾಸನದಲ್ಲಿ ಪ್ರಥಮಬಾರಿಗೆ ಮಲೈಯಕುನಿಯ ನಿನ್ರಪೆರುಮಾಳ್ ಎಂಬ

ಉಲ್ಲೇಖ ದೊರೆಯುತ್ತದೆ. ಈ ವಿಗ್ರಹ ನಿಂತ ಭಂಗಿಯಲ್ಲಿದ್ದು ಧ್ರುವದೇರದ ಪ್ರತಿರೂಪವಾಗಿದೆ. ಮೇಲಿನ ಎರಡು ಕೈಗಳಲ್ಲಿ ಶಂಖಚಕ್ರಗಳಿದ್ದರೆ ಕೆಳಗಿನ ಎಡ ಹಸ್ತ ಕಟ್ಯವಲಂಬಿತವಾಗಿಯೂ ಬಲದ ಹಸ್ತ ವರದ ಹಸ್ತವಾಗಿಯೂ ಇವೆ. ಈ ವಿಗ್ರಹಕ್ಕೆ ಚಿನ್ನ ಪ್ಲಾಟಿನಂಗಳಿಂದ ಮಾಡಿದ ಅತ್ಯಂತ ಸಿರಿವಂತವಾದ ಆಭರಣಗಳ ಭಂಡಾರವಿದೆ.

ಬ್ರಹ್ಮೋತ್ಸವ ಒಂದು ಸಂದರ್ಭದಲ್ಲಿ ಗ್ರಾಮದಲ್ಲಿ ಬೆಂಕಿ ಕಾಣಿಸಿಕೊಂಡು ಬಹುವಾದ ನಷ್ಟವುಂಟಾಯಿತಂತೆ. ಅರ್ಚಕರಿಗೆ ಏಕೆ ಹೀಗಾಯಿತೆಂದು ಅರ್ಥವಾಗಲಿಲ್ಲ. ದೇವರು ಒಬ್ಬ ಮನುಷ್ಯನ ಮೂಲಕ ಹೇಳಿಸಿದನಂತೆ; ಕಾಲಪರಿವರ್ತನೆಯಾಗಿದೆ. ಇದುವರೆಗೆ ಉತ್ಸವಕ್ಕೆ ಬಳಸುವ ಉಗ್ರ ಶ್ರೀನಿವಾಸನ ಮೂರ್ತಿಯನ್ನು ಬಿಟ್ಟುಹೊಸ ಉತ್ಸವ ಮೂರ್ತಿಯನ್ನು ಹುಡುಕಿ ತೆಗೆಯಿರಿ ಎಂಬುದಾಗಿ. ಪ್ರಾಯಶಃ ಇದರಿಂದಾಗಿಯೇ ಮೊದಲಿನ ಮೂರ್ತಿಗೆ ಉಗ್ರಮೂರ್ತಿಯೆಂದು ಹೆಸರು ಬಂದಿರಬೇಕು. ಬೆಟ್ಟದ ಮೇಲೆ ಒಂದು ಕಣಿವೆಯಲ್ಲಿ ಈಗಿನ ಉತ್ಸವಮೂರ್ತಿಯೂ, ನಾಚ್ಚಿಯಾರರೂ ಕಾಣಿಸಿಕೊಂಡರು. ಬೆಟ್ಟದ ತಗ್ಗಿನಲ್ಲಿ ಕಂಡುಬಂದ ದೇವರಾದ್ದರಿಂದ ಮಲ್ಕೈಕುನಿಯ ನಿನ್ರ ಪೆರುಮಾಳ್ ಎಂದೇ ಹೆಸರಾಗಿ, ಮುಂದೆ ಇದೇ ಸಂಕ್ಷಿಪ್ತವಾಗಿ ಮಲೆಯಪ್ಪನ್ ಆಗಿದೆ. ಆತ ಕಂಡುಬಂದ ಕಣಿವೆಯನ್ನೇ ಮಲೆಯಪ್ಪಕೋನೈ ಎಂದು ಗುರುತಿಸಲಾಗಿದೆ.

ಧ್ರುವ ಬೇರವನ್ನು ಪ್ರತಿನಿಧಿಸುವ ವಿಗ್ರಹಗಳ ಆದ್ಯತೆಯೆಂದರೆ ಭೋಗ ಶ್ರೀನಿವಾಸ, ಮಲೆಯಪ್ಪ ಮತ್ತಿಬ್ಬರು ನಾಚ್ಚಿಯಾರರು, ಉಗ್ರ ಶ್ರೀನಿವಾಸ ಹಾಗೂ ಕೊಲುವು ಶ್ರೀನಿವಾಸ. ಆಗಮ ಶಾಸ್ತ್ರ ರೀತ್ಯ ಇವರುಗಳು ಕೌತುಕ, ಉತ್ಸವ, ಸ್ನಪನ, ಬಲಿ ಬೇರಗಳಾಗುತ್ತವೆ. ಆಗಮ ಶಾಸ್ತ್ರ ಪ್ರಕಾರ ಕೌತುಕ ಬೇರವನ್ನು ನೇರವಾಗಿ ಧ್ರುವಬೇರದಿಂದಲೂ, ಉತ್ಸವ ಬೇರವನ್ನು ಕೌತುಕಬೇರದಿಂದಲೂ ಹೀಗೇ ಮುಂದುವರೆದು ಸಂಬಂಧಿಸಬೇಕು. ಆದರೆ ಆಲಯದ ಶಾಸನಗಳಾವುವೂ ಮಲೆಯಪ್ಪನನ್ನು ಉತ್ಸವಬೇರವೆಂದಾಗಲೀ, ಭೋಗ ಶ್ರೀನಿವಾಸನನ್ನು ಕೌತುಕ ಬೇರವೆಂದಾಗಲೀ ಹೇಳುವುದಿಲ್ಲ.

ಹದಿನಾಲ್ಕು ಅಂಗುಲ ಎತ್ತರವಿರುವ ಪೀಠದ ಮೇಲೆ ನಿಂತಿರುವ ಭಂಗಿಯ ಮಲೆಯಪ್ಪ ೩ ಅಡಿಗಳ ಎತ್ತರವಿರಬಹುದು. ಬಲಗಡೆಗೆ ನಾಲ್ಕು ಅಂಗುಲದ ಪೀಠದ ಮೇಲೆ ಮೂವತ್ತು ಅಂಗುಲ ಎತ್ತರದ ಶ್ರೀದೇವಿಯಿದ್ದಾಳೆ. ಇದೊಂದು ಪಂಚಲೋಹದ ವಿಗ್ರಹ. ಆಕೆಯ ಎಡಗೈ ಕಟಿಹಸ್ತವಾಗಿಯೂ ಬಲಗೈ ಗಜಮುದ್ರೆಯಲ್ಲಿ ನೀಳವಾಗಿರುವುದೂ ಆಗಿದೆ. ಭೂದೇವಿ ಎಡಕ್ಕೆ ನಿಂತಿದ್ದು, ಶ್ರೀದೇವಿ ಭೂದೇವಿಯರಲ್ಲಿನ ವ್ಯತ್ಯಾಸವೆಂದರೆ ಭೂದೇವಿಯ ಬಲಹಸ್ತ ಕಟಿಹಸ್ತವಾಗಿಯೂ ಎಡಗೈ ಗಜಮುದ್ರೆಯಲ್ಲಿ ನೀಳವಾಗಿರುವುದೂ ಆಗಿದೆ.

ವರದರಾಜಸ್ವಾಮಿ ದೇವಾಲಯದ (ತಿರುಮಲೆಯ ಆಲಯದ ಒಳಗಡೆ ಇದೆ.) ಉತ್ತರದ ಗೋಡೆಯ ಮೇಲೆ ತ್ರಿಭುವನ ಚಕ್ರವರ್ತಿ ಶ್ರೀರಂಗನಾಥಯಾದವರಾಯನ ಒಂದು ಶಾಸನದಲ್ಲಿ ಮಲೆಯಕುನಿಯ ನಿನ್ರ ಪೆರುಮಾಳ್ ಹಾಗೂ ನಾಚ್ಚಿಯಾರರ ಉಲ್ಲೇಖವಿದ್ದು ಕ್ರಿ.ಶ. ೧೩೩೯ಕ್ಕೆ ಸೇರಿದ ಇದೇ ಈ ವಿಗ್ರಹಗಳ ಮೊದಲ ಉಲ್ಲೇಖ.

## ರುಕ್ಮಿಣೀ ಶ್ರೀಕೃಷ್ಣಸ್ವಾಮಿ

ಗರ್ಭಗೃಹದಲ್ಲಿ ರುಕ್ಮಿಣಿಯೊಡನಿರುವ ಬಹು ಸುಂದರವಾದ ನವನೀತನೃತ್ಯ ಭಂಗಿಯ ಶ್ರೀಕೃಷ್ಣ ವಿಗ್ರಹವಿದೆ. ಮುದ್ದಾದ ಮಗುವಿನ ರೂಪದಲ್ಲಿ ದೇವರು ನಾಟ್ಯಮಾಡುತ್ತಿರುವಂತೆ ಚಿತ್ರಿಸಲಾಗಿದ್ದು ಕಮಲದ ಮೇಲೆ ನಿಂತು ಎಡಗಾಲಿನ ಮೇಲೆ ಬಲಗಾಲನ್ನು ಅಡ್ಡವಾಗಿಟ್ಟ ಭಂಗಿಯಲ್ಲಿದೆ. ಬಲಗೈಯಲ್ಲಿ ಬೆಣ್ಣೆ ಮುದ್ದೆಯನ್ನು ಹಿಡಿದಿದ್ದರೆ ಎಡಗೈ ಆನಂದದಿಂದ ನೀಳವಾಗಿ ಚಾಚಿದೆ.

ಈ ವಿಗ್ರಹದ ಬಗ್ಗೆ ದೊರೆಯುವ ಅತಿ ಪ್ರಾಚೀನ ಶಾಸನವೆಂದರೆ ಕ್ರಿ.ಶ. ೧೧೦೦ ರ ಕಾಲದ್ದು. ಇತರ ಶಾಸನಗಳು ಶ್ರೀಕೃಷ್ಣ ಜಯಂತಿಯಂದು ವಿಗ್ರಹಕ್ಕೆ ನೀಡುವ ನೈವೇದ್ಯದ ಬಗ್ಗೆಯೂ, ಬ್ರಹ್ಮೋತ್ಸವಗಳ ನಿವೇದನೆಯ ಬಗ್ಗೆಯೂ ವಿವರಿಸುತ್ತವೆ. ಧನುರ್ಮಾಸದಲ್ಲಿ ಏಕಾಂತಸೇವೆಯನ್ನು ಸ್ವೀಕರಿಸುವ ವಿಗ್ರಹ ಇದು.

ಶ್ರೀಕೃಷ್ಣಸ್ವಾಮಿಯ ವಿಗ್ರಹವಾಗಲೀ ಶ್ರೀರಾಮನ ವಿಗ್ರಹವಾಗಲೀ ನಿತ್ಯಪೂಜೆ ಪಡೆಯುವುದಿಲ್ಲ. ಶ್ರೀ ವೆಂಕಟೇಶ್ವರಸ್ವಾಮಿಯ ನಿತ್ಯಾರ್ಚನೆಯನ್ನೇ ಸ್ವೀಕರಿಸುವರು. ಶ್ರೀರಾಮ ಶ್ರೀಕೃಷ್ಣರ ನಿವೇದನೆಯನ್ನೂ ವೆಂಕಟೇಶ್ವರಸ್ವಾಮಿಗೆ ಮೊದಲು ಒಪ್ಪಿಸಲಾಗುತ್ತದೆ. ಆದರೆ ಆಸ್ಥಾನಗಳಲ್ಲೂ, ಹೊರಗಣ ಉತ್ಸವಗಳಲ್ಲಿಯೂ ಈ ವಿಗ್ರಹಕ್ಕೆ ಮೊದಲು ನೇರ ಸಮರ್ಪಣೆ, ಈ ಪದ್ಧತಿಯು ವಿಜಯನಗರ ಕಾಲದ೧೨-೮-೧೪೮೬ ರ ೧೪೨ನೇ ಜಿ.ಟಿ. ಶಾಸನದಲ್ಲಿ ವಿವರಿತವಾಗಿದೆ.

## ಶ್ರೀರಾಮ ಸೀತೆ ಲಕ್ಷ್ಮಣ ಸುಗ್ರೀವರ ವಿಗ್ರಹಗಳು

ಶ್ರೀರಾಮ (ರಘುನಾಥ) ಸೀತೆ, ಲಕ್ಷ್ಮಣ, ಸುಗ್ರೀವರ, ನಾಲ್ಕು ತಾಮ್ರದ ವಿಗ್ರಹಗಳೂ ಗರ್ಭಗೃಹದಲ್ಲಿವೆ. ಕ್ರಿ.ಶ. ೧೪೭೬ ರ ಮೊದಲಿನ ಯಾವುದೇ ಶಾಸನದಲ್ಲೂ ಈ ವಿಗ್ರಹಗಳ ಬಗ್ಗೆ ಉಲ್ಲೇಖವಿಲ್ಲ. ಕ್ರಿ.ಶ. ೧೨೪೫ ರಲ್ಲಿ ರಾಮರ್ ಮೇಡೈ (ತಿರುಮಲೆಯ ಆಲಯದಲ್ಲಿ)ಯನ್ನು ಪೂರ್ಣಗೊಳಿಸಿ ಒಂದು ಕೊಠಡಿಯನ್ನಾಗಿಸಿದಾಗ ಈ ವಿಗ್ರಹಗಳನ್ನು ಅಲ್ಲಿ ಸ್ಥಾಪಿಸಿದುದರಿಂದ ಈ ಕೋಣೆಯನ್ನು ರಾಮರ್ ಮೇಡೈ ಎಂದು ಕರೆದಿರಬಹುದು. ರಾಮಾನುಜರೇ ಈ ಮೂರ್ತಿಗಳನ್ನು ಆಲಯದಲ್ಲಿ ಸ್ಥಾಪಿಸಿರಬಹುದು ಎಂದೂ ಹೇಳುವರುಂಟು.

ಶ್ರೀರಾಮನ ವಿಗ್ರಹ ಮಧ್ಯಮ ತಾಳದ ತ್ರಿಭಂಗದಲ್ಲಿದೆ. ಎಡಗೈ ಮೇಲಿದ್ದು ಬಿಲ್ಲನ್ನು ಹಿಡಿಯುವಂತೆಯೂ ಬಲಗೈ ನೆಲಮುಖವಾಗಿ ಬಾಣವನ್ನು ಹಿಡಿಯಲು ಸಿದ್ಧವಾಗಿರುವಂತೆಯೂ ಇವೆ. ಇದು ನಿಂತ ನಿಲುವಿನ ವಿಗ್ರಹವಾಗಿದ್ದು ತಲೆಯಲ್ಲಿ ಕಿರೀಟವಿದೆ. ರಾಮಚಂದ್ರನ ಎಡಗಡೆಗೆ ಸೀತೆ ನಿಂತ ಭಂಗಿಯಲ್ಲಿದ್ದು ಬಲಗೈ ನೆಲಮುಖವಾಗಿಯೂ, ಎಡಗೈಯಲ್ಲಿ ಪದ್ಮವನ್ನು ಹಿಡಿದಂತೆಯೂ ಇದೆ. ರಾಮನ ವಿಗ್ರಹದಂತೆಯೇ ಲಕ್ಷ್ಮಣನ ವಿಗ್ರಹ. ಸುಗ್ರೀವನ ವಿಗ್ರಹ ನಿಂತ ನಿಲುವಿನದ್ದು ಕೈಗಳೆರಡನ್ನೂ ಮುಂದೆ ತಂದು ಜೋಡಿಸಿ ನಮಸ್ಕಾರ ಮಾಡುತ್ತಿದ್ದಾನೆ.

ಆನಂದ ನಿಲಯದಲ್ಲಿನ ರಾಮರ್ ಮೇಡೆಯ ಅಂತರಾಳ ಮಂಟಪದಲ್ಲಿ ಅಂಗದ ಹಾಗೂ ಹನುಮಂತರ ಸುಂದರ ತಾಮ್ರವಿಗ್ರಹಗಳೂ ಇವೆ. ಇವುಗಳೆದುರಿಗೆ ವಿಶ್ವಕ್ಸೇನ, ಅನಂತ, ಗರುಡರ ಸುಂದರ ತಾಮ್ರವಿಗ್ರಹಗಳನ್ನು ಕಾಣಬಹುದು.

## ಚಕ್ರತ್ತಾಳ್ವಾರ್

ಈ ಮೂರ್ತಿಯು ಉತ್ಸವ ಮೂರ್ತಿಯ ಮೆರವಣಿಗೆಯಲ್ಲಿ ಯಾವಾಗಲೂ ಮುಂದಿರುತ್ತದೆ. ಆದರೆ ಅಂಕುರಾರ್ಪಣೆ, ತೀರ್ಥವಾರಿಗಳಂದು ಪ್ರತ್ಯೇಕವಾಗಿ ನಡೆಯುತ್ತಾನೆ. ಬ್ರಹ್ಮೋತ್ಸವದ ಅವಭೃತ ಈ ಚಕ್ರತ್ತಾಳ್ವಾರರಿಗೆ ನಡೆಯುವುದು.



# ಬ್ರಹ್ಮೋತ್ಸವ

ಆಂಗ್ಲಮೂಲ : (ಹಿಸ್ಟರಿ ಆಫ್ ತಿರುಪತಿ)
ಟಿ.ಕೆ.ಟಿ. ವೀರರಾಘವಾಚಾರ್ಯ.

ಬ್ರಹ್ಮೋತ್ಸವದ ದಿನಗಳ ಸಂಖ್ಯೆ ಎರಡರಿಂದ ಹದಿಮೂರಕ್ಕೆ ಏರಿದುದನ್ನು ಶಾಸನಗಳಿಂದ ತಿಳಿಯಬಹುದಾಗಿದೆ. ಉತ್ಸವ ವಿಗ್ರಹವನ್ನು ಬೀದಿ ಮೆರವಣಿಗೆಯಲ್ಲಿ ಬಿಜಯ ಮಾಡಿಸುವ ವಾಹನಗಳೂ ಕ್ರಮೇಣ ಹೆಚ್ಚುತ್ತ ಬಂದದ್ದನ್ನು ಕಾಣಬಹುದಾಗಿದೆ. ಶಾಸನಗಳ ಪ್ರಕಾರ ಮೊದಲನೆಯ ಬ್ರಹ್ಮೋತ್ಸವ ಹತ್ತುದಿನಗಳ ಕಾಲ ನಡೆಯಿತೆಂದೂ ಅದು ನಡೆದದ್ದು ಕ್ರಿ.ಶ. ೯೬೬ ರಲ್ಲಿ ಎಂದೂ ತಿಳಿದು ಬರುತ್ತದೆ. ಮೊದಲನೆಯ ದಿನ ಅಥವಾ ಅಂಕುರಾರ್ಪಣೆಯು ಬಹುಶಃ ಸಾಯಂಕಾಲದಲ್ಲಿ ಆರಂಭವಾದ ತಿರುವೀಧಿ ಮೆರವಣಿಗೆಯಂತರ ರಾತ್ರಿಯಲ್ಲಿ ನಡೆದ ಬೀಜಾವಾಪನೆಯಾಗಿರಬೇಕು. ಎರಡನೆಯ ದಿನ ಸಂಜೆ ವೈದಿಕ ವಿಧಿಗಳೊಡನೆ ಧ್ವಜಸ್ತಂಭದ ಮೇಲೆ ಧ್ವಜಾರೋಹಣ ನಡೆದು ನಂತರ ಮೆರವಣಿಗೆ - ತದನಂತರ ಪ್ರತಿದಿನ ಬೆಳಗಿನ ಹೊತ್ತು ಹಾಗೂ ಸಂಜೆಗಳಲ್ಲಿ ತಿರುವೀಧಿ ಮೆರವಣಿಗೆ ನಡೆದಿರಬೇಕು. ಆದರೆ ಯಾವ ವಿಗ್ರಹವನ್ನು ಮೆರವಣಿಗೆಯಲ್ಲಿ ತೆಗೆದುಕೊಂಡು ಬರಲಾಯಿತು ಎಂಬುದರ ಬಗ್ಗೆ ಖಚಿತವಾಗಿಲ್ಲ. ಅಂದಿಗೆ ಹೊಸದಾಗಿದ್ದ ಮೂಲಮೂರ್ತಿಯನ್ನೇ ಹೋಲುವ ಬೆಳ್ಳಿಯ ವಿಗ್ರಹವಂತೂ ಆಗಿರಲಾರದು. ಇನ್ನಾವುದೋ ಮೂರ್ತಿ ಆಗಿರಲಿಕ್ಕೂ ಸಾಕು. ಉತ್ಸವ ಅಂಕುರಾರ್ಪಣೆಯ ದಿನದಿಂದ ತೀರ್ಥವಾರಿಯವರೆಗೆ ಹತ್ತು ದಿನ ನಡೆಯಿತು.



ವಜ್ರಕವಚ ಶ್ರೀನಿವಾಸ

ನಾಲ್ಕು ಶತಮಾನಗಳ ನಂತರ ಕ್ರಿ.ಶ. ೧೩೯೨ ರ ಒಂದು ಶಾಸನದಲ್ಲಿ ತೀರ್ಥವಾರಿಯ ಬಳಿಕ ವಿದಯಾತ್ರಿ (ವಿಜಯಯಾತ್ರೆ) ಉತ್ಸವವನ್ನು ಆಚರಿಸಲು ಒಂದು ದಿನವನ್ನು ಜೋಡಿಸಲಾಯಿತೆಂದು ತಿಳಿದುಬರುತ್ತದೆ. ಈ ಹೊತ್ತಿಗಾಗಲೇ ವರ್ಷಕ್ಕೆ ಏಳು ಬ್ರಹ್ಮೋತ್ಸವಗಳಾಗುತ್ತಿದ್ದವು. ಹೊಸ ಉತ್ಸವಮೂರ್ತಿ - 'ಮಲೆಯ ಕುನಿಯ ನಿನ್ರ ಪೆರುಮಾಳ್' ಕ್ರಿ.ಶ. ೧೩೩೯ ರ ಹೊತ್ತಿಗೆ ಪ್ರವೇಶವಾಗಿರಬೇಕು. ಕ್ರಿ.ಶ. ೧೪೪೫-೧೪೪೭ ರ ವರ್ಷಗಳಲ್ಲಿ ಉತ್ಸವಕಾರ್ಯಕ್ರಮಗಳಲ್ಲಿ ಮತ್ತೂ ಹಲವು ಪರಿವರ್ತನೆಗಳನ್ನು ತಂದು ಹೊಸ ಅಂಶಗಳನ್ನು ಸೇರಿಸಲಾಯಿತು. ಅಂಕುರಾರ್ಪಣೆಯ (ತಿರುಮುಲೈ) ದಿನದಂದು ತಿರುಕಲ್ಯಾಣವೆಂಬ ಕಲ್ಯಾಣೋತ್ಸವವನ್ನು ಸೇರಿಸಲಾಯಿತು. ಅಂದು ಸಂಜೆ ಕೈಯರ್‌ಚಕ್ರಂ (ಪ್ರಾಯಶಃ ಚಕ್ರತ್ತಾಳ್ವಾರ್) ತಿರುವೀಧಿ ಮೆರವಣಿಗೆ ನಡೆದಿತ್ತು. ಕ್ರಿ.ಶ. ೧೫೪೫ ರ ಒಂದು ಶಾಸನದಲ್ಲಿ (ಒಂದು ಶತಮಾನದ ನಂತರ) ತಿರುಕಲ್ಯಾಣವು ಅಂಕುರಾರ್ಪಣೆಯ ದಿನದಲ್ಲಿಯಲ್ಲದೆ ಮೊದಲನೆಯದಿನ ನಡೆಯುವ ಉತ್ಸವವೆಂದು ಹೇಳಲಾಗಿದೆ. ಒಂಭತ್ತನೆಯ ದಿನ - ಸ್ವಾಮಿ ಪುಷ್ಕರಿಣಿಯಲ್ಲಿ ಚಕ್ರತ್ತಾಳ್ವಾರ್ ಸ್ನಾನಗೊಳ್ಳುವ ದಿನದ ರಾತ್ರಿ ಅಧಿವಾಸವೂ, ಧ್ವಜಾವರೋಹಣವೂ ನಡೆದಂತೆ ತಿಳಿಯುತ್ತದೆ. ಕ್ರಿ.ಶ. ೧೫೪೫ ರ ಶಾಸನದಲ್ಲಿ ಮೊದಲಬಾರಿಗೆ ಚೂರ್ಣ ಅಭಿಷೇಕದ ಉಲ್ಲೇಖ ಕಂಡುಬರುತ್ತದೆ. ಅಂದು ದೇವರ ಮುಂದೆ ಓಲಗದಲ್ಲಿ ಲೆಕ್ಕಗಳನ್ನು ನಿವೇದಿಸಲಾಗುತ್ತಿತ್ತು.

ಕ್ರಿ.ಶ. ೧೪೪೬ ರಲ್ಲಿ ಅಂಕುರಾರ್ಪಣೆಯಿಂದ ಹನ್ನೊಂದನೆಯ ದಿನದಲ್ಲಿ ಪುಷ್ಪಯಾಗವನ್ನು ಸೇರಿಸಿದಂತೆ ತಿಳಿದುಬರುತ್ತದೆ. ಈ ದಿನದ ಪ್ರಾಮುಖ್ಯವನ್ನು 'ಪತ್ತಾಂ ತಿರುನಾಳಿಲ್ ವಿಡೈ ಕೊಡುತ್ತು ಅರುಳುಂ ಪೋದು' ಎಂಬ ಪದಗಳಿಂದ ಸೂಚಿಸಲಾಗಿದೆ. ಇದರಿಂದಾಗಿ ಬ್ರಹ್ಮೋತ್ಸವದ ದಿನಗಳಲ್ಲಿ ಸಂರಕ್ಷಣೆಯ ಕೆಲಸ ನಿರ್ವಹಿಸಿದ ದೇವತೆಗಳಿಗೆ ಬೀಳ್ಕೊಡುಗೆ ನೀಡಲಾಯಿತೆಂದು ತಿಳಿಯಬೇಕು. ಈ ಸೇರ್ಪಡೆಗಳಿಂದಾಗಿ ಹತ್ತು ದಿನದ ಬ್ರಹ್ಮೋತ್ಸವ ಹನ್ನೆರಡು ದಿನಗಳದಾಯಿತು ಎಂದಾಯಿತು. ಈ ಸಂಖ್ಯೆ ಒಂದು

ವಿಜಯಾತ್ರೆ ದಿನವನ್ನು ಎರಡು ದಿನಗಳಿಗೇರಿಸಿದಾಗ ಹದಿಮೂರು ದಿನ ಮುಟ್ಟಿತು.

ಕ್ರಿ.ಶ. ೧೫೪೪ ರಲ್ಲಿ ಬ್ರಹ್ಮೋತ್ಸವಗಳಿಗೆ ಪೂರ್ವರಂಗ ಸಿದ್ಧತೆಯಲ್ಲಿ ಅವಶ್ಯವೆಂಬ ಒಂದು ಕಾರ್ಯಕ್ರಮವನ್ನು ಪ್ರವೇಶಗೊಳಿಸಲಾಯಿತು. ಇದೇ ಕೋಯಿಲ್ ಆಳ್ವಾರ್ ತಿರುಮಂಜನಂ. ತದನಂತರದ ಕಾಲದಲ್ಲಿ ಈ ಕಾರ್ಯಕ್ರಮ ಅತ್ಯಗತ್ಯ ಕಾರ್ಯಕ್ರಮವಾಗಿ ಇಂದಿಗೂ ಮುಂದುವರಿದಿದೆ. ಈ ದಿನದಂದು ಬೆಳಗಿನ ಪೂಜೆಗಳೆಲ್ಲ ಮುಗಿದ ಮೇಲೆ ಪೆರಿಯ ಪೆರುಮಾಳ್ ಹಾಗೂ ಬೆಳ್ಳಿಯ ಮೂರ್ತಿಯ ಹೊರತು ಗರ್ಭಗುಡಿಯ ಎಲ್ಲ ಪೂಜಾ ವಸ್ತು ಪರಿಕರ ಸಾಮಗ್ರಿಗಳನ್ನೂ ಬೇರೆಡೆಗೆ ತಂದು, ಒಳಗಿರುವ ವಿಗ್ರಹಗಳಿಗೆ ಜಲನಿರೋಧಕ ಕವಚ ತೊಡಿಸಿ, ಗರ್ಭಗೃಹವನ್ನು ನೀರಿನಿಂದ ತೊಳೆಯುತ್ತಾರೆ. ನಂತರ ಎಲ್ಲವನ್ನೂ ಅರಿಶಿಣ, ಕರ್ಪೂರ ಬೆರೆಸಿದ ಗಂಧದಿಂದ ಲೇಪಿಸಿ ಪುನಃ ತೊಳೆಯುವರು. ಹೀಗಾಗಿ ಇದೊಂದು ಪೂರ್ಣವಾಗಿ ಪರಿಶುಭ್ರತಾ ಪ್ರಕ್ರಿಯೆ. ಎಲ್ಲವನ್ನೂ ಶುಚಿಗೊಳಿಸಿದ ನಂತರ ಜಲನಿರೋಧಕ ಕವಚಗಳನ್ನು ತೆರೆದು ವೈದಿಕ ವಿಧಿಗಳನುಸಾರ ಪೂಜೆ ನಡೆಯುತ್ತದೆ. ದೊಡ್ಡಪ್ರಮಾಣದಲ್ಲಿ ನೈವೇದ್ಯವನ್ನು ಸಮರ್ಪಿಸಲಾಗುತ್ತದೆ. ಈ ಸೇವೆಯನ್ನು ಗೃಹಸ್ಥರು ಅರ್ಜಿತ ಸೇವಾ ಶುಲ್ಕ ನೀಡುವುದರಿಂದಲೂ ವರ್ಷದಲ್ಲಿ ಯಾವಾಗಲಾದರೂ (ಸಾಮಾನ್ಯವಾಗಿ ಮಂಗಳವಾರಗಳಲ್ಲಿ) ನಡೆಸಬಹುದು.

ಇಲ್ಲಿ ಗಮನಾರ್ಹ ಅಂಶವೆಂದರೆ ಬ್ರಹ್ಮೋತ್ಸವದ ದಿನಗಳಲ್ಲಿನ ಸೇರ್ಪಡೆಗಳೆಲ್ಲ ಮಲೆಯಕುನಿಯ ನಿನ್ರ ಪೆರುಮಾಳ್ (ಮಲೆಯಪ್ಪಸ್ವಾಮಿ) ಹಾಗೂ ಶ್ರೀದೇವಿ ಭೂದೇವಿಯರ ಆಗಮನದ ನಂತರವೇ (ಎಂದರೆ ಕ್ರಿ.ಶ. ೧೩೯೩ ರ ಸುಮಾರಿನ ನಂತರ) ಆದದ್ದು ಎಂಬುದು.

ಈಗ ಬ್ರಹ್ಮೋತ್ಸವದ ವಾಹನಗಳ ಬಗ್ಗೆ ಗಮನ ಹರಿಸಬಹುದು. ಪ್ರಾಚೀನಕಾಲದಲ್ಲಿ ಯಾವುದೇ ವಾಹನದ ಉಲ್ಲೇಖವೂ ಕಂಡುಬರುವುದಿಲ್ಲ. ಇತರ ಹಬ್ಬ ಹರಿದಿನಗಳಲ್ಲಿ ಬಳಕೆಯಾಗುತ್ತಿದ್ದ ತಿರುಚ್ಚಿ (ಪಲ್ಲಕ್ಕಿ)ಯೇ ಬ್ರಹ್ಮೋತ್ಸವಗಳಲ್ಲೂ ಬಳಕೆಯಾಗುತ್ತಿದ್ದಿತೆಂದು ಹೇಳಬಹುದು. ಕ್ರಿ.ಶ. ೧೩೯೦, ೧೩೫೪, ೧೩೮೦ ರ ಶಾಸನಗಳಲ್ಲಿ ಚೇದಿಯರಾಯನ್ ಕಟ್ಟಿಸಿದ ತಿರುಚ್ಚಿಗೆ ಮಾತ್ರವೇ ಸ್ಥಳಾವಕಾಶವಿದ್ದಂತಹ ತಿರುಪ್ಪು ಮಂಟಪದಲ್ಲಿ ನೈವೇದ್ಯ ಮಾಡಲಾಗುತ್ತಿತ್ತು ಎಂದು ಹೇಳಲಾಗಿದೆ. ಕ್ರಿ.ಶ. ೧೪೭೪ ರ ವರೆಗಿನ ಶಾಸನಗಳಾವುವೂ ಉತ್ಸವಗಳಲ್ಲಿ ವಾಹನಗಳನ್ನು ಬಳಸಲಾಗುತ್ತಿತ್ತೆಂದು ಹೇಳಿಲ್ಲ. ಆದರೆ ಕ್ರಿ.ಶ. ೧೨೩೫ ರಲ್ಲಿ ತಿರುಪತಿಯ ಗೋವಿಂದರಾಜಸ್ವಾಮಿಗಾಗಿ ವೀರನರಸಿಂಗ ಯಾದವರಾಯನು ನಾಲ್ಮುಗತ್ತೇರ್ (ನಾಲ್ಕು ಮುಖದ ರಥ) ಒಂದನ್ನು ನಿರ್ಮಿಸಿದನೆಂದು ಶಾಸನದ ಮೂಲಕ ತಿಳಿದುಬರುವುದರಿಂದ, ಆ ಹೊತ್ತಿಗಾಗಲೇ ತಿರುಮಲೆಯ ದೇವರಿಗೂ ಅಂತಹದೇ ಒಂದು ರಥ ಇದ್ದಿರಬೇಕು ಎಂದು ಊಹಿಸಬಹುದು. ಕ್ರಿ.ಶ. ೧೪೭೬ ಶಾಸನದಲ್ಲಿ ಎರಡು ಬ್ರಹ್ಮೋತ್ಸವಗಳಲ್ಲಿ (ಪುರಟ್ಟಾಸಿ ಹಾಗೂ ಫಂಗುಣಿ ಬ್ರಹ್ಮೋತ್ಸವಗಳಲ್ಲಿ) ರಥವನ್ನು ಬಳಸಿದ ಉಲ್ಲೇಖವಿದೆ. ಈ ರಥ ಯಾತ್ರೆಯನ್ನು ಯಾವಾಗಲೂ ಧ್ವಜಾರೋಹಣದಿಂದ ಎಂಟನೆಯ ದಿನ ನಡೆಸಲಾಗುತ್ತಿತ್ತು. ಕ್ರಿ.ಶ. ೧೪೯೧ ರ ಒಂದು ಶಾಸನದ ಪ್ರಕಾರ ರಥಯಾತ್ರೆಯ ದಿನದ ರಾತ್ರಿ ಉತ್ಸವರನ್ನು ಅಶ್ವವಾಹನದಲ್ಲಿ ಕರೆದೊಯ್ಯಲಾಗುತ್ತಿದ್ದಿತು. ಅಶ್ವವಾಹನದ ಬಗ್ಗೆ ಇದೇ ಪ್ರಥಮ ಉಲ್ಲೇಖ. ಆದರೂ ಉತ್ಸವದ ಏಳನೇ ದಿನವೇ ಅತ್ಯಂತ ಪ್ರಧಾನದಿನವಾಗಿ, ಅಂದಿನ ದಿನಕ್ಕಾಗಿ ಪ್ರಸಾದ ನಿವೇದನೆಗಳಿಗಾಗಿ ಅಸಂಖ್ಯ ದಾನಗಳು ಹೇಳಲ್ಪಟ್ಟಿವೆ. ಉತ್ಸವದ ಒಂಭತ್ತನೆಯದಿನ - ಎಂದರೆ ತೀರ್ಥವಾರಿಯ ದಿನ ಬೆಳಗಿನ ಹೊತ್ತು ಶೇಷವಾಹನದ ಉಲ್ಲೇಖವಿದೆ. ಆದರಿದು ಪ್ರಚಲಿತ ಆಚಾರವಾಗಲಿಲ್ಲ. ಕ್ರಿ.ಶ. ೧೭೧೪ ರಿಂದ ಬೆಳ್ಳಿಯ ಶೇಷವಾಹನವನ್ನು ಮೊದಲನೆಯ ದಿನದ ರಾತ್ರಿ ವಾಹನವಾಗಿ ಬಳಕೆಗೆ ತರಲಾಗಿದೆ.

ಕ್ರಿ.ಶ. ೧೫೩೦ ರ ಒಂದು ಶಾಸನದಿಂದ ಬ್ರಹ್ಮೋತ್ಸವದ ಐದನೆಯ ದಿನ ಪ್ರಾತಃಕಾಲದ ಉತ್ಸವ ಶ್ರೀಕೃಷ್ಣನಿಗೆ ಸಂಬಂಧಿಸಿದುದಾಗಿಯೂ ಆ ದಿನದಂದು ಯಾವ ವಾಹನವೂ ಬಳಕೆಯಲ್ಲಿ



ಕನಕ ರಥ

ರಲಿಲ್ಲವೆಂದೂ ನಾವು ತಿಳಿಯಬಹುದು. ಆದರೆ ಅಂದು ರಾತ್ರಿ ಗರುಡವಾಹನದಲ್ಲಿ ಉತ್ಸವಮೂರ್ತಿಯೂ ಉಭಯ ನಾಚ್ಚಿಯಾರರೂ ಬೀದಿ ಮೆರವಣಿಗೆಯಲ್ಲಿ ಬರುತ್ತಿದ್ದರು. ಏನೇ ಆದರೂ ಕ್ರಿ. ಶ. ೧೫೩೦ ರವರೆಗೆ ಯಾವುದೇ ದಿನವಲ್ಲೂ ಗರುಡವಾಹನದ ಬಳಕೆಯ ಉಲ್ಲೇಖಗಳಿಲ್ಲ.

ಕ್ರಿ.ಶ. ೧೫೨೦ ರ ಶಾಸನದಂತೆ ತೈಮಾಸದ ಬ್ರಹ್ಮೋತ್ಸವದ ಆರನೇ ದಿನ ಅಣ್ಣಾ ಊಂಜಲ್ ಉತ್ಸವವನ್ನು ನಡೆಸಿದಂತೆ ತಿಳಿದು ಬರುತ್ತದೆ. ಇದನ್ನು ರಾತ್ರಿಯ ಹೊತ್ತಿನಲ್ಲಿ ಆಚರಿಸಿದಂತೆ ಕಂಡುಬರುವುದು. ಇದೇ ಶಾಸನವು ರಥೋತ್ಸವವು ಏಳನೆಯ ದಿನ ನಡೆಯುತ್ತಿತ್ತೆಂದು ತಿಳಿಸುತ್ತವೆ. ಎಂಟನೆಯ ದಿನವೆಂಬುದನ್ನಿಲ್ಲಿ ತಪ್ಪಾಗಿ ಏಳನೆಯ ದಿನವೆಂದು ಗುರುತಿಸಿರಬೇಕು. ಕ್ರಿ.ಶ. ೧೫೭೪ ರಿಂದ ಸೂರ್ಯಪ್ರಭವಾಹನವೂ ವೈಕುಂಠವಿಮಾನವೂ ಬಳಕೆಗೆ ಬಂದಿರಬೇಕು. ಕ್ರಿ.ಶ. ೧೫೮೩ ರ ಒಂದು ಶಾಸನ ಹಂಸವಾಹನವನ್ನೂ ಗಜವಾಹನವನ್ನೂ ಕುರಿತು ಹೇಳುವುದು. ಕ್ರಿ.ಶ. ೧೬೧೪ ರ ಶಾಸನದಲ್ಲಿ ಬ್ರಹ್ಮೋತ್ಸವದ ಮೂರನೆಯ ದಿನ ರಾತ್ರಿ ಬಳಸಲೆಂದು ಒಂದು ಬೆಳ್ಳಿಯ ಸಿಂಹವಾಹನವನ್ನು ನೀಡಲಾಗಿದೆ. ಕ್ರಿ.ಶ. ೧೬೨೮ ರಲ್ಲಿ ಮಟ್ಲ ಕುಮಾರ ಅನಂತರಾಯನು ಒಂದು ಬಂಗಾರದ ಅಶ್ವವಾಹನ, ಒಂದು ಬೆಳ್ಳಿಯ ಗಜವಾಹನ, ಒಂದು ಸಮರ ಭೂಪಾಲವಾಹನ (ಈಗ ಸರ್ವಭೂಪಾಲವಾಹನವೆನ್ನುವುದು) ಸಮರ್ಪಿಸಿದ. ಕ್ರಿ.ಶ. ೧೬೩೮ ರಲ್ಲಿ ವರ್ಷದಲ್ಲಿ ಹನ್ನೊಂದು ಬ್ರಹ್ಮೋತ್ಸವಗಳಿದ್ದರೂ ಇವುಗಳಲ್ಲಿ ಐದರಲ್ಲಿ (ಪುರಟ್ಟಾಸಿ, ಕಾರ್ತೀಕೈ, ತೈ, ಪಂಗುಣಿ, ಆಣಿ ಮಾಸಗಳಲ್ಲಿ) ರಥೋತ್ಸವ ನಡೆಯುತ್ತಿತ್ತು. ಎಲ್ಲ ಬ್ರಹ್ಮೋತ್ಸವಗಳ ತೀರ್ಥವಾರಿಯೂ ಶ್ರವಣ ನಕ್ಷತ್ರದಲ್ಲಿ ಕೊನೆಗೊಳ್ಳುತ್ತಿರಲಿಲ್ಲ ಎಂಬುದನ್ನು ನೆನಪಿನಲ್ಲಿಡಬೇಕು. ದೇವರಾಯ ಮಹಾರಾಯನ ಆಶ್ವಯುಜ ಬ್ರಹ್ಮೋತ್ಸವ ಪುನರ್ವಸು ನಕ್ಷತ್ರದಲ್ಲಿ ಆರಂಭವಾಗಿ ಸ್ವಾತಿ ನಕ್ಷತ್ರದಲ್ಲಿ ಮುಗಿಯುತ್ತಿತ್ತು. ತಾಳ್ಳಪಾಕ ತಿರುಮಲೈ ಅಯ್ಯಂಗಾರ್ಯನ ಆಣಿ ಬ್ರಹ್ಮೋತ್ಸವ ಶ್ರವಣ ನಕ್ಷತ್ರದಲ್ಲಿ ಆರಂಭವಾಗಿ ಆತನ ಹಾಗೂ ಅಚ್ಯುತರಾಯ ಮಹಾರಾಯನ ಜನ್ಮ ನಕ್ಷತ್ರವಾದ ಮೃಗಶಿರದಲ್ಲಿ ಮುಕ್ತಾಯವಾಗುತ್ತಿತ್ತು.

ಮಿಕ್ಕ ಬ್ರಹ್ಮೋತ್ಸವಗಳ ಬಗ್ಗೆ ವಿವರಗಳು ದೊರೆತಿಲ್ಲ. ಆದರೆ ಇಲ್ಲಿಯೇ ಹೇಳಬಹುದಾದ ಒಂದು ಮಾತೆಂದರೆ ಕ್ರಿ.ಶ. ೧೬೧೬ ರಲ್ಲಿ ತಿರುಪತಿಯ ಗೋವಿಂದರಾಜಸ್ವಾಮಿ ದೇವಾಲಯದಲ್ಲಿ ವರ್ಷದಲ್ಲಿ ನಾಲ್ಕು -- ವೈಯಾಸಿ, ಆಣಿ, ಆವಣಿ, ಮಾಸಿ ತಿಂಗಳುಗಳಲ್ಲಿ -- ಬ್ರಹ್ಮೋತ್ಸವಗಳಾಗುತ್ತಿದ್ದವು.



ದೊಡ್ಡ ಶೇಷವಾಹನ

ಮೇಲಿನ ವಿವರದಿಂದ ತಿಳಿದು ಬರುವ ಖಚಿತ ಅಂಶವೆಂದರೆ ಹಲವಾರು ಮಂದಿ ಭಕ್ತಜನರು ಬೇರೆ ಬೇರೆ ಕಾಲಾವಧಿಯಲ್ಲಿ ಕೈಗೊಂಡ ವಿವಿಧ ಕಾರ್ಯಕ್ರಮಗಳಿಂದಾಗಿ ಕ್ರಮೇಣ ಒಂದು ಪರಂಪರೆ ಸ್ಥಾಪಿತವಾಯಿತು ಎಂಬುದು.

ಒಂಭತ್ತನೆಯದಿನ ಬೆಳಗ್ಗೆ ಉಪಯೋಗಿಸಲಾಗುತ್ತಿದ್ದ ಶೇಷವಾಹನವನ್ನು ಇಂದು ಮೊದಲ ದಿನ ರಾತ್ರಿ ವಾಹನವನ್ನಾಗಿಯೂ ಮೂರನೆಯ ದಿನ ಬೆಳಗ್ಗೆ ಒಂದು ಕಿರಿಯ ಶೇಷವಾಹನವನ್ನೂ ಬಳಸಲಾಗುತ್ತಿದೆ. ಎರಡನೆಯ, ಮೂರನೆಯ ಹಾಗೂ ನಾಲ್ಕನೆಯ ಮತ್ತು ಏಳನೆಯ ದಿನ ಯಾವ ವಾಹನಗಳೂ ಮೊದಲಿಗೆ ಇರಲಿಲ್ಲ. ಶಾಸನಗಳು ಬ್ರಹ್ಮೋತ್ಸವ ಬೆಳೆದು ಬಂದ ಬಗೆಯನ್ನು ವಿವರಿಸುತ್ತವೆ.

ಗಮನಾರ್ಹವಾದ ವಿವರಗಳ ಮತ್ತೊಂದು ಅಂಶವೆಂದರೆ ಬ್ರಹ್ಮೋತ್ಸವ ಹಾಗೂ ಮತ್ತಿತರ ಉತ್ಸವಗಳಲ್ಲಿನ ಆಚರಣೆಯಲ್ಲಿ ಅವಿಭಾಜ್ಯ ಅಂಗವಾಗಿ ಸೇರಿರುವ ಉತ್ಸವದ ಘೋಷಣೆಯ ಅಂಗವಾದ ಅದಿರ್ವೆಡಿ ಎಂಬ ಆಲಯದ ಮುಂದೆ ಪಟಾಕಿ ಸ್ಫೋಟ ಕಾರ್ಯಕ್ರಮ. ಕಾಂಚೀಪುರಂಗೆ ಪ್ರಾಯಶಃ ಸೇರಿದ ಎಟ್ಟೂರು ತಿರುಮಲನಂಬಿ ತಾತಾಚಾರ್ಯರು ಪೆನಾಲಿಬಾಣ (ಬಾಣ ಬಿರುಸು) ಕ್ಕಾಗಿ ನೀಡಿದ ೨೦ ರೇಖೈಪೊನ್ ದಾನದ ಬಗ್ಗೆ ತಿಳಿಸುವ ಕ್ರಿ.ಶ. ೧೫೮೩ ರ ಶಾಸನವೇ ಈ ಬಗೆಯವುಗಳಲ್ಲಿ ಮೊದಲನೆಯದು. ಅದಿರ್ವೆಡಿಯನ್ನು ಇಲ್ಲಿ ಹೇಳಿಲ್ಲ.

✪✪✪

# ಬ್ರಹ್ಮೋತ್ಸವ ವಾಹನ ವಿವರ

ಬ್ರಹ್ಮನೇ ಬ್ರಹ್ಮೋತ್ಸವದ ಆರಂಭಕರ್ತೃವೆಂದು ಹೇಳಲಾಗಿದೆ. ಅದನ್ನು ನಿರೂಪಿಸಲೆಂಬಂತೆ ಬ್ರಹ್ಮ ಆಕಾರ ರಹಿತವಾಗಿ ಇಡೀ ಬ್ರಹ್ಮೋತ್ಸವವನ್ನು ಚಿಕ್ಕ ರಥದಲ್ಲಿದ್ದು ಪರಿಶೀಲಿಸುತ್ತಾನೆ.

ಹತ್ತು ದಿನಗಳ ಬ್ರಹ್ಮೋತ್ಸವದ ಮೊದಲನೆಯ ದಿನ ಸ್ವಲ್ಪ ನೀರಸವೆಂದೇ ಹೇಳಬೇಕು. ಇತರ ದಿನಗಳ ವೈಭವ, ಅಲಂಕರಣ ಮಂತ್ರ ಘೋಷಗಳ ದಿಗಂತ ವಿಶ್ರಾಂತತೆಗಳಿಗೆ ಹೋಲಿಸಿ ನೋಡಿದಲ್ಲಿ. ಮೊದಲ ದಿನದ ಸಂಜೆ ತಿರುಮಲೆ ದೇವಸ್ಥಾನದ ನಿತ್ಯಪೂಜೆಗಳ ನಂತರ ಸ್ವಾಮಿಯ ಸೇನಾಧಿಪತಿ ವಿಶ್ವಕ್ಸೇನರು ಗ್ರಾಮೋತ್ಸವಕ್ಕೆ ಹೊರಟು, ಕಲ್ಯಾಣ ಮಂಟಪ ಯಾಗಶಾಲೆಗೆ ಅಗತ್ಯವಾದ ಪವಿತ್ರ ಮೃತ್ತಿಕೆಯನ್ನು ಸಂಗ್ರಹಿಸಿಕೊಂಡು ಬರುತ್ತಾರೆ. ಈ ಸಮಯದಲ್ಲಿ ಮಾರನೆಯ ದಿನದಿಂದ ಆರಂಭವಾಗುವ ಬ್ರಹ್ಮೋತ್ಸವಕ್ಕೆ ಬರಬೇಕೆಂದು ವಿವಿಧ ದೇವತೆಗಳನ್ನು ಆಹ್ವಾನಿಸುವಿಕೆಯೂ ನಡೆಯುತ್ತದೆ.

ವೈಖಾನಸಾಗಮದ ಎಲ್ಲ ಶಾಸ್ತ್ರ ವಿಧಿಗಳೊಡನೆ ಮಾರನೆಯ ದಿನ ಪ್ರಾತಃಕಾಲ ಬ್ರಹ್ಮೋತ್ಸವದ ಅಂಕುರಾರ್ಪಣೆ ನಡೆಯುತ್ತದೆ. ಪೆರಿಯ ಪೆರುಮಾಳರ ಬಳಿ ನಿಂತು ಅವರ ಒಪ್ಪಿಗೆಯನ್ನು ಪಡೆದು ಅಷ್ಟದಿಕ್ಪಾಲಕರನ್ನು ಆಹ್ವಾನಿಸಿ ಅವರನ್ನು ಬಲಿ ಆವರಣದ ಎಂಟು ದಿಕ್ಕುಗಳಲ್ಲಿ ಸ್ಥಾಪಿಸಲಾಗುತ್ತದೆ. ಈ ದಿವ್ಯ ಸನ್ನಿವೇಶವನ್ನು ಸಂದರ್ಶಿಸುವ ಭಾಗ್ಯ ಹಲವರಿಗೆ ಮಾತ್ರವೇ; ಕಾರಣ ದೇವಾಲಯದ ಒಳಗಡೆಯ ಸ್ಥಳ ಬಹು ಕಡಮೆ ಇರುವಿಕೆ. ಬಂಗಾರದ ಧ್ವಜಸ್ತಂಭದ ಮೇಲೆ ನೂತನ ವಸ್ತ್ರದ ಗರುಡಧ್ವಜವನ್ನು ಪ್ರಧಾನ ಪುರೋಹಿತರು ಏರಿಸುತ್ತಾರೆ. ಸ್ವಾಮಿಯನ್ನು ಅಲಂಕರಿಸಿ ನಾಚ್ಚಿಯಾರುಗಳೊಡನೆ ತಿರುಮಲರಾಯ ಮಂಟಪದಲ್ಲಿ ಒಡ್ಡೋಲಗವನ್ನು ನಡೆಸಲಾಗುತ್ತದೆ. ಪ್ರತಿದಿನವೂ ಮಲೆಯಪ್ಪ ಸ್ವಾಮಿಯ ಉತ್ಸವ ಆರಂಭವಾಗುವ ಮೊದಲು ಬ್ರಹ್ಮ(ಅಲಂಕಾರ ಸಹಿತ, ಮೂರ್ತಿರಹಿತ ರಥ) ಉತ್ಸವ ಮಾರ್ಗದಲ್ಲಿ ಹೊರಡಬೇಕು.



ಕಲ್ಪವೃಕ್ಷ ವಾಹನ

ಆ ದಿನ ಸಂಜೆ ಶ್ರೀ ವೆಂಕಟೇಶ್ವರನ ಉತ್ಸವ ಮೂರ್ತಿ ಮಲೆಯಪ್ಪಸ್ವಾಮಿ ಮತ್ತು ಶ್ರೀದೇವಿ ಭೂದೇವಿಯರಿಗೆ ಸಪ್ತಭೋಗಗಳ ದೊಡ್ಡ ಶೇಷವಾಹನದಲ್ಲಿ ಮೆರವಣಿಗೆ ಮಾಡಲಾಗುತ್ತದೆ. ಶೇಷನು ಸ್ವಾಮಿಯ ಪ್ರಥಮ ಕಿಂಕರನಾದದ್ದರಿಂದಲೂ, ಅತಿ ಸನ್ನಿಹಿತನಾದದ್ದರಿಂದಲೂ ಬ್ರಹ್ಮೋತ್ಸವದಲ್ಲಿ ಸ್ವಾಮಿ ಸೇವೆಯ ಪ್ರಥಮಾವಕಾಶ ಶೇಷನಿಗೆ ದೊರೆಯುವುದು. ಶೇಷ ಶೇಷೀ ಭಾವದ ವಿಶಿಷ್ಟಾದ್ವೈತ ಸಿದ್ಧಾಂತ ಇಲ್ಲಿ ಅವಧಾರಿತವಾಗಿ ಶೇಷಾಧಿರೋಹಿ ಶೇಷಿಯನ್ನು(ನಾರಾಯಣನನ್ನೂ) ಸಂದರ್ಶಿಸಿದವರ ಕಾಮ ಮೋಹ ಮೊದಲಾದ ಅರಿಷಡ್ವರ್ಗ ನಾಶವಾಗುವುದೆಂದು ಹೇಳಲಾಗಿದೆ.

ಮೂರನೆಯದಿನ ಪ್ರಾತಃಕಾಲ ಮಲೆಯಪ್ಪ ಸ್ವಾಮಿ ಮಾತ್ರವೇ ಸಣ್ಣ ಶೇಷವಾಹನನಾಗಿ ಹೊರಹೊರಡುವನು. ದೇವರು ಭಕ್ತಜನರ ವತ್ಸಲನೆಂಬುದನ್ನು ಅವಧಾರಿಸಲು ಮತ್ತೆ ಶೇಷವಾಹನನಾಗುತ್ತಾನೆ ಎಂಬುದು ಇಲ್ಲಿನ ಸಂಕೇತಾರ್ಥವೆಂದು ಹೇಳಬಹುದು.

ಅಂದು ರಾತ್ರಿ ಸ್ವಾಮಿಯು ವೀಣಾಪಾಣಿ ಸರಸ್ವತಿಯಾಗಿ ಹಂಸವಾಹನನಾಗಿ ಮೆರೆಯುತ್ತಾನೆ. ರಾಕ್ಷಸರಿಂದ ವೇದಾಪಹರಣವಾದಾಗ ಸ್ವಯಂಭುವು ಹಂಸರೂಪಿಯಾಗಿ ಬ್ರಹ್ಮನಿಗೆ ವೇದಗಳ ಪಾಠ ಹೇಳಿದ ಪ್ರಸಂಗವನ್ನು ನೆನಪಿಗೆ ತರುವ ಈ ಹಂಸವಾಹನನು ಪರಮಹಂಸ ಎಂಬುದು ಅವಗಾಹನೆಯಾಗಲೆಂದೇ ಈ ವಾಹನ.

ಮಾರನೆಯದಿನ ಬೆಳಗ್ಗೆ ಸಿಂಹವಾಹನ.

ಗರುಡ ವಾಹನ ಗಜ ವಾಹನ



ನೃಸಿಂಹನಾಗಿ ವಿಷ್ಣು ಹಿರಣ್ಯಕಶಿಪುವನ್ನು ಸಂಹಾರಮಾಡಿದ್ದು ನೆನಪಿಗೆ ಬರುತ್ತದೆ. 'ಮೃಗಾಣಾಂ ಚ ಮೃಗೇಂದ್ರೋಽಹಂ' ಎನ್ನುವ ಗೀತಾವಾಕ್ಕಿನಂತೆ ತನ್ನ ತೇಜೋಂಶ ಸಿಂಹದಲ್ಲೂ ಇದೆ ಎಂಬುದನ್ನು ಈ ವಾಹನ ಸೂಚಿಸುತ್ತದೆ. 'ಸ್ವಯಮೇವ ಮೃಗೇಂದ್ರತಾ' ಎಂಬಂತೆ ಮೃಗೇಂದ್ರವಾಹನನೂ ಸ್ವಯಮೇವನೇ ಆಗಿದ್ದಾನೆ ಎಂಬುದನ್ನೂ ಇದು ಅವಧಾರಿಸುತ್ತದೆ.

ಅಂದಿನ ರಾತ್ರಿ ಉಭಯ ನಾಚ್ಚಿಯಾರುಗಳೊಡನೆ ಸ್ವಾಮಿಯು ದಿವ್ಯಾಲಂಕಾರಭೂಷಿತನಾಗಿ ಮುತ್ತಿನ ಚಪ್ಪರದ ವಾಹನದಲ್ಲಿ ಭಕ್ತಜನ ಹೃತ್ಕುಮುದಕೋರಕನಾಗಿ ಮೆರೆಯುತ್ತಾನೆ. ಇದು ಭವಿಷ್ಯೋತ್ತರ ಪುರಾಣದ ಆಧಾರದಿಂದ ಅದನ್ನನುಸರಿಸಿ ನಡೆಯುವ ಗೌಣೋತ್ಸವ ಎಂದೂ ಹೇಳುವವರುಂಟು.

ಮಾರನೆಯ ದಿನ ಬೆಳಗ್ಗೆ ಮಲೆಯಪ್ಪಸ್ವಾಮಿ ಉಭಯ ನಾಚ್ಚಿಯಾರುಗಳೊಡನೆ ಅಲಂಕೃತನಾಗಿ ಕಲ್ಪವೃಕ್ಷವಾಹನ ಆಗುತ್ತಾನೆ. ಅಭೀಷ್ಟಿತಾರ್ಥವನ್ನು ನೀಡುವ ಕಲ್ಪವೃಕ್ಷವನ್ನು ಅಧಿರೋಹಿಸುವ ಸ್ವಾಮಿ ಕಲಿಯುಗ ವರದ ಎಂಬುದರಲ್ಲಿ ಎರಡು ಅಭಿಪ್ರಾಯಕ್ಕೆ ತಾವೆಲ್ಲಿದೆ? ಕಲ್ಪವೃಕ್ಷವೂ ಕಲಿಯುಗ ವರದನಿಗಿಂತ ಕಡಮೆಯೇ ಎಂಬುದನ್ನು ಸೂಚಿಸುವುದೇ ಈ ವಾಹನದ ಉದ್ದೇಶವೆಂಬಂತಿದೆ.

ಅಂದು ಸಂಜೆ ಶ್ರೀದೇವಿ ಭೂದೇವಿಯರೊಡನೆ ಮಲೆಯಪ್ಪಸ್ವಾಮಿಯ ಸರ್ವಭೂಪಾಲ ವಾಹನ. ಬಂಗಾರದ ನೀರಿನಿಂದ ತೊಳೆಯಲ್ಪಟ್ಟ ವಾಹನದಲ್ಲಿ ದೇವರು ದಿವ್ಯಪೀತಾಂಬರಗಳನ್ನುಟ್ಟು ನಯನಾನಂದಕರವಾಗಿ ನಿಂತ ಭಂಗಿಯಿಂದ ಆತ್ಮ ಭೂಪಾಲನಂತೆ ಕಂಡುಬರುತ್ತಾನೆ. ಸರ್ವ ಭೂಪಾಲವಾಹನವನ್ನೂ ಗೌಣೋತ್ಸವದ ಒಂದು ಅಂಗವೆಂದು ಹೇಳುವುದುಂಟು.

ಮಾರನೆಯದಿನ ಪ್ರಾತಃಕಾಲ ಬ್ರಹ್ಮೋತ್ಸವದ ಒಂದು ರಸಶಿಖರವನ್ನು ತಲುಪುತ್ತೇವೆ. ಅಂದು ಗರುಡವಾಹನೋತ್ಸವ. ಬೆಳಗ್ಗೆ ಮೋಹಿನಿ ಅವತಾರ. ದೇವದಾನವರಲ್ಲಿ ಅಮೃತಕ್ಕಾಗಿ ಕಾದಾಟವಾದಾಗ ಮೋಹಿನೀ ರೂಪದಿಂದ ಶ್ರೀಮನ್ನಾರಾಯಣನು ಅಮೃತವಿತರಣೆ ಮಾಡಿದುದನ್ನು ನೆನೆಸಿಕೊಳ್ಳಬಹುದು. ಮಾನವನ ಮನವೂ ಒಂದು ದೇವ ದಾನವ ಯುದ್ಧ ಭೂಮಿಯೇ ಆಗಿ, ಶಾಶ್ವತ ಸಾತ್ವಿಕ ತಾಮಸ ಶಕ್ತಿಗಳು ನಿರಂತರವಾಗಿ ಹೊಡೆದಾಡುವಾಗ ದೈವವು ಸಾತ್ವಿಕತೆಯನ್ನೆತ್ತಿ ಹಿಡಿದು ತಾಮಸ ಶಕ್ತಿಗಳನ್ನು ನಾಶಪಡಿಸುವುದು ಎಂಬುದನ್ನಿದು ಸೂಚಿಸುವುದು. (ಗರುಡೋತ್ಸವದ ಒಂದು ಅಂಗವೇ ಈ ಮೋಹಿನೀ ಅವತಾರ ಎನ್ನುವವರುಂಟು.)

ಅಂದು ಸಂಜೆ ವೇದಗಳ ಪ್ರತೀಕವಾದ ಗರುಡನ ಮೇಲೇರಿ ಸ್ವಾಮಿಯು ಆಸ್ತಿಕರಿಗೆ ಕಂಡುಬರುತ್ತಾನೆ. 'ಗರುಡನು ನಿತ್ಯಸೂರಿ, ಸ್ವಾಮಿಯದಾಸ, ಸಖಿ, ವಾಹನ, ಧ್ವಜಚಿಹ್ನೆಯಾಗಿ ಬೆಳಗುತ್ತಿದ್ದಾನೆ. ಸಖಿನೆಂಬುದರಿಂದ ಗರುತ್ಮಂತನಿಗೆ ತಿಳಿಯದ ಸ್ವಾಮಿರಹಸ್ಯ ಯಾವುದೂ ಇಲ್ಲ ಎಂಬುದು ತಿಳಿಯುತ್ತದೆ.' ಮಲೆಯಪ್ಪಸ್ವಾಮಿ ಗರುಡವಾಹನವನ್ನೇರಿದಾಗ ಅಪರೂಪದ ಮಕರಕಂಠಿ, ಲಕ್ಷ್ಮೀಹಾರಗಳನ್ನು ಧರಿಸಿ ಶೋಭಾಯಮಾನನಾಗಿ ಕಂಡುಬರುತ್ತಾನೆ. ಮೂಲವರರಿಗೆ ಆಭರಣಗಳಾದ ಲಕ್ಷ್ಮೀಹಾರ, ಮೊದಲಾದವು ಇಲ್ಲಿ ಗರುಡವಾಹನದಲ್ಲಿ ಉತ್ಸವರಿಗೆ ಆಭರಣಗಳಾಗುತ್ತವೆ. ಶ್ರೀವಿಲ್ಲಿಪುತ್ತೂರಿನ ಶ್ರೀ ಗೋದಾದೇವಿಯವರ ಕಡೆಯಿಂದ ತುಳಸೀಹಾರಗಳು ಬಂದು ಸೇರುತ್ತವೆ. ಮದರಾಸಿನ ಶ್ವೇತ ಛತ್ರಗಳು ಸ್ವಾಮಿಯ ಸೇವೆಗೆ ಆಗಮಿಸುತ್ತವೆ. ಆಂಧ್ರಪ್ರದೇಶ ಸರ್ಕಾರದ ವತಿಯಿಂದ ರೇಷ್ಮೆ ವಸ್ತ್ರಗಳು ಬರುತ್ತವೆ ಸ್ವಾಮಿಗೆ ಅಲಂಕಾರವಾಗಲು.

ಮಾರನೆಯದಿನ ಮಲೆಯಪ್ಪಸ್ವಾಮಿಗೆ ಬೆಳಗ್ಗೆ ಹನುಮದ್ವಾಹನ, ಸಮುದ್ರ ಸೇತುವಿನಲ್ಲಿ ರಾಮನನ್ನು ಹೆಗಲಲ್ಲಿ ಹೊತ್ತು ನಡೆದ ಹನುಮಂತ ನೆನಪಿಗೆ ಬರುತ್ತಾನೆ. ತ್ರೇತಾಯುಗದ ಶ್ರೀರಾಮನೇ

ಕಲಿಯುಗದ ವೆಂಕಟನಾಥನಾಗಿದ್ದನೆ ಎಂಬುದನ್ನು ಒತ್ತಿಹೇಳಲು ಈ ಹನುಮದ್ವಾಹನವಿದೆ.

ಅಂದು ಮಧ್ಯಾಹ್ನ ಸ್ವಾಮಿ ವಸಂತೋತ್ಸವದಲ್ಲಿ ಪಾಲುಗೊಳ್ಳುತ್ತಾನೆ. ಉಭಯ ನಾಚ್ಚಿಯಾರುಗಳೊಡನೆ ಪಶ್ಚಿಮವೀಧಿಯ ವಸಂತಮಂಟಪದಲ್ಲಿ ಸರ್ವಸುಗಂಧಪೂರಿತ ಜಲದಲ್ಲಿ ಅಭಿಷಿಕ್ತವಾದ ಮಲೆಯಪ್ಪಸ್ವಾಮಿ ಆಲಯಕ್ಕೆ ಹಿಂದಿರುಗಿ ಬಂದು (ಈ ಬಾರಿ ಕನಕ ರಥವನ್ನೇರಿ ಸ್ವಾಮಿ ವಸಂತೋತ್ಸವಕ್ಕೆ ಬರುತ್ತಾನೆ) ಗಜವಾಹನನಾಗಿ ಗ್ರಾಮೋತ್ಸವಕ್ಕೆ ಹೊರಡುತ್ತಾನೆ. 'ಮೊಸಳೆಗೆ ಸಿಕ್ಕ ಆನೆಯನ್ನು ರಕ್ಷಿಸಿದಂತೆ', 'ಕರಿರಾಜ ಕಷ್ಟದಲಿ ಆದಿಮೂಲಾ ಎಂದು ಕರೆಯಲಾಕ್ಷಣ ಬಂದು ಒದಗಿದ ಹರಿ', ಹಾಗೆ ಶರಣಾಗತರಾಗಿ ನಾವೂ ರಕ್ಷಿಸಲ್ಪಡಬಹುದು ಎಂಬುದು ಇಲ್ಲಿ ಕಂಡುಬರುವ ಅಂಶ.

ಮಾರನೆಯದಿನ ಬೆಳಗ್ಗೆ ಸೂರ್ಯಪ್ರಭವಾಹನ ಅಂದು ರಾತ್ರಿ ಚಂದ್ರಪ್ರಭವಾಹನ. ಸೂರ್ಯಚಂದ್ರರು ದೈವನಿಯಾಮಿತರು ಎಂಬುದನ್ನು ಇದು ಸಂಕೇತಿಸುತ್ತದೆ. ಸೂರ್ಯನಜ್ಞಾನ, ಚಂದ್ರನ ಶಾಂತಿ, ತಂಪುಗಳಿಗೆಲ್ಲವೂ ಅಧಿಪತಿ 'ಅವನೇ' ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಕಪಿಲತೀರ್ಥದ ಪಕ್ಕದಲ್ಲಿ 'ಇಡಾ' ಎಂಬ ಸೂರ್ಯನಾಡಿ, ತಿರುಮಲೆ ದೆಟ್ಟದ ಚಂದ್ರಪುಷ್ಕರಿಣಿಯ ಬಳಿ ಪಿಂಗಳ ಎನ್ನುವ ಚಂದ್ರನಾಡಿ ಇರುವುದರಿಂದ ಸೂರ್ಯಚಂದ್ರನಾಡಿಗಳ ಮೂಲಕ ಸ್ವಯಂಭುವನ್ನು ಸೇರಬಹುದು ಎಂಬುದನ್ನೂ ಇದು ಪ್ರತಿಮಿಸುತ್ತದೆ.

ಮಾರನೆಯದಿನ ರಥೋತ್ಸವ. ಗರುಡೋತ್ಸವದಂತೆಯೇ ಇದೂ ಅತಿಹೆಚ್ಚಿನ ಜನರನ್ನು ಆಕರ್ಷಿಸುತ್ತದೆ. ಅಂದು ಬೆಳಗ್ಗೆ ಉಭಯ ನಾಚ್ಚಿಯಾರುಗಳೊಡನೆ ಮಲೆಯಪ್ಪಸ್ವಾಮಿಯು ವಿಶಿಷ್ಟ ಕಲಾವಿಲಸಿತವಾದ ರಥವನ್ನೇರಿ ಬರುತ್ತಿರುವಾಗ ಸಹಸ್ರಾರುಮಂದಿ ಭಕ್ತರು ಗೋವಿಂದ ನಾಮಸ್ಮರಣೆ, ಘೋಷಣೆ ಮಾಡುತ್ತಾರೆ. ರಥದ ಸುದೀರ್ಘ ಹಗ್ಗವನ್ನೆಳೆಯುತ್ತ ಅಸಂಖ್ಯ ಆಸ್ತಕರು ಶರೀರ ರಥವನ್ನು ಜ್ಞಾನಮಾರ್ಗದ ಮೂಲಕ ಎಳೆಯುತ್ತ ಸ್ವಾಮಿ ಸನ್ನಿಧಿಯನ್ನು ಸೇರಲು ಪ್ರಯತ್ನಿಸುವಂತೆ ಕಂಡುಬರುತ್ತಾರೆ.

ಅಂದು ರಾತ್ರಿ ಅಶ್ವವಾಹನ. ಮಲೆಯಪ್ಪಸ್ವಾಮಿಯು ವೀರಗಚ್ಚೆಹಾಕಿ, ತುರಗಾರೋಹಿಗಾಗಿ ಗ್ರಾಮೋತ್ಸವಕ್ಕೆ ಹೊರಡುತ್ತಾನೆ. ಇಂದ್ರಿಯಗಳ ಪ್ರಭುವೆಂಬುದು ಇಲ್ಲಿ ಪ್ರಕಟವಾಗುತ್ತದೆ. ಜೀವಶಕ್ತಿಯ ಪ್ರತೀಕವಾಗಿ ಅಶ್ವ ಮನಃಶಾಸ್ತ್ರದಲ್ಲಿ ಪ್ರಸಿದ್ಧ. ಜೀವಸತಿ ದೇವಪತಿಭಾವ ಅಶ್ವವಾಹನದ ಸ್ವಾಮಿಯ ಸಂಕೇತಾರ್ಥವೆಂದೂ ಹೇಳಬಹುದು.

ಕಡೆಯ ದಿನ ಎಂದರೆ ಹತ್ತನೆಯದಿನವೇ ಅವಭೃಥಸ್ನಾನ, ಮಲೆಯಪ್ಪಸ್ವಾಮಿಯು ಉಭಯ ನಾಚ್ಚಿಯಾರುಗಳೊಡನೆ ಮೆರವಣಿಗೆಯಲ್ಲಿ ಸ್ವಾಮಿ ಪುಷ್ಕರಿಣಿಯ ಬಲಭಾಗದ ಆದಿವರಾಹಸ್ವಾಮಿ ಆಲಯಕ್ಕೆ ಬರುತ್ತಾರೆ, ಅಲ್ಲಿ ಶಾಸ್ತ್ರೋಕ್ತವಾಗಿ ಅವಭೃಥಸ್ನಾನ ಸಾಂಗವಾಗುತ್ತದೆ. ಬ್ರಹ್ಮೋತ್ಸವವು ಪೂರ್ಣವಾದದ್ದರ ಪ್ರತೀಕವಾಗಿ ಸುದರ್ಶನ ಚಕ್ರಕ್ಕೆ ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನವಾಗುತ್ತದೆ. ಇದನ್ನು ಚಕ್ರಸ್ನಾನವೆಂದು ಹೇಳುವುದುಂಟು. ಈ ಚಕ್ರಸ್ನಾನದ ವೇಳೆಯಲ್ಲಿ ಪುಷ್ಕರಿಣಿಯಲ್ಲಿ ಸ್ನಾನಮಾಡುವವರು ವಾಗ್ವೃದ್ಧಿ, ಧನಧಾನ್ಯಸಂಪತ್ತು, ಶತ್ರುಮರ್ದನಗಳ ವರಗಳನ್ನು ಪಡೆದು ದೇವಪ್ರಿಯರಾಗುತ್ತಾರೆ ಎಂದು ನುಡಿವರು.

ಹತ್ತು ದಿನಗಳ ಹಬ್ಬ ಮುಗಿದ ಈ ಹೊತ್ತಿನಲ್ಲಿ ಮಂಗಳಾಕ್ಷತೆ ವಿನಿಯೋಗವಾಗುತ್ತದೆ.

ಮೂರು ವರುಷಗಳಿಗೊಂದುಬಾರಿ ಅಧಿಕಮಾಸಬರುತ್ತದೆ. ಆ ಸಂವತ್ಸರದಲ್ಲಿ ತಿರುಮಲೆಯಲ್ಲಿ ಆಶ್ವಯುಜಮಾಸದಲ್ಲಿ ನವರಾತ್ರಿಯಲ್ಲೂ ಒಂದು ಬ್ರಹ್ಮೋತ್ಸವ ನಡೆಯುತ್ತದೆ. ಇದನ್ನು ಎರಡನೆಯ ಬ್ರಹ್ಮೋತ್ಸವವೆನ್ನುತ್ತಾರೆ.

(1979 ಸೆಪ್ಟಂಬರ್ ಸಂಚಿಕೆಯಿಂದ)



ಸಿಂಹ ವಾಹನ ಹಂಸ ವಾಹನ



ರಥೋತ್ಸವ



ಚಕ್ರಸ್ನಾನ



# ತಿರುಪತಿ ತಿಮ್ಮಪ್ಪ

ಪ್ರೊ. ಎಸ್.ಕೆ. ರಾಮಚಂದ್ರರಾವ್



ಮೊದಲಿಗೆ ದೆಟ್ಟದ ಮೇಲೆ ಊರು ಇರಲಿಲ್ಲವಾಗಿ. ಈ ಉತ್ಸವ ನಡೆಯುವುದು ಸಾಧ್ಯವೂ ಇಲ್ಲದೆ, ನಡೆದರೆ ಸ್ವಾರಸ್ಯವೂ ಇರದಂತಾಗಿದ್ದುತು. ಜನ ಸೇರಿದರೇ ಉತ್ಸವವಲ್ಲವೆ? ಹೀಗಾಗಿ ವಿಧಿಯಂತೆ ಗುಡಿಯಲ್ಲಿ ಧ್ವಜಾರೋಹಣವನ್ನು ನಡೆಸಿ, ಉತ್ಸವಮೂರ್ತಿಯನ್ನು ದೆಟ್ಟದ ಕೆಳಗೆ ತಿರುಚ್ಚಾನೂರಿಗೆ ತಂದು ಅಲ್ಲಿ ಬ್ರಹ್ಮೋತ್ಸವವನ್ನು ವಿಧಿಯಂತೆ ನಡೆಸಿ ಅವಭೃಥವಾದಮೇಲೆ ಮತ್ತೆ ದೆಟ್ಟದಮೇಲೆ ಒಯ್ಯುತ್ತಿದ್ದರೆಂದು 'ತಿರುಮಲೆ-ಒಳುಗು' ಏನಿಂದ ತಿಳಿದುಬರುತ್ತದೆ. ರಾಮಾನುಜರು ಇದು ಸರಿಯಲ್ಲವೆಂದು ಬಗೆದು, ದೆಟ್ಟದ ಮೇಲೇ ಗುಡಿಯ ಸುತ್ತ ಬೀದಿಗಳನ್ನೂ ಮನೆಗಳನ್ನೂ ಕಟ್ಟಬೇಕೆಂದು ಸೂಚಿಸಿ ಅಲ್ಲೇ ಬ್ರಹ್ಮೋತ್ಸವವು ನಡೆಯುವ ಏರ್ಪಾಟು ಮಾಡಿದರಂತೆ.

ಅಧಿಕಮಾಸವಿದ್ದ ವರ್ಷ, ನವರಾತ್ರಿಯಂದು ಮಾಮೂಲಾಗಿ ನಡೆಯುವ ಬ್ರಹ್ಮೋತ್ಸವವಲ್ಲದೆ, ಇನ್ನೊಂದು ಬ್ರಹ್ಮೋತ್ಸವವೂ ಕಾಲೋತ್ಸವವಾಗಿ ನಡೆಯುತ್ತದೆ. ಆಗ (ನವರಾತ್ರಿಯ) ಉತ್ಸವದಲ್ಲಿ ಧ್ವಜಾರೋಹಣ ಮತ್ತು ಅವಭೃಥ - ಇವೆರಡು ವಿಧಿಗಳನ್ನು ಬಿಟ್ಟು ಉಳಿದ ವಿಧಿಗಳು ಜರುಗುತ್ತವೆ. ಶ್ರದ್ಧೋತ್ಸವವಾಗಿ ಬ್ರಹ್ಮೋತ್ಸವವನ್ನು ಸೇವಾರ್ಥಿಗಳ ಅನುಕೂಲವಿದ್ದಂತೆ ಯಾವಾಗಲಾದರೂ ಮಾಡಬಹುದು. ದೆಟ್ಟದ ಗುಡಿಯಲ್ಲಿ ಇಂಥ ಬ್ರಹ್ಮೋತ್ಸವಗಳು ಹಲವಾರು ಬಾರಿ ನಡೆಯುವ ವಾಡಿಕೆಯಿದೆ. ಕ್ರಿಸ್ತಾಬ್ದ 1551ರ ಶಾಸನ, ವರ್ಷದಲ್ಲಿ ಹನ್ನೊಂದು ಬ್ರಹ್ಮೋತ್ಸವಗಳು ನಡಿಯುತ್ತಿದ್ದುವೆಂದು ಸೂಚಿಸುತ್ತದೆ. ಈಗ ವರ್ಷದಲ್ಲಿ ನಾಲ್ಕು ಬ್ರಹ್ಮೋತ್ಸವಗಳು ನಡೆಯುತ್ತವೆ. ಮುಖ್ಯವಾದುದು ಮೇಲೆಹೇಳಿದ ನವರಾತ್ರಿಯದು. ಇದು ಮಾನವ ಬ್ರಹ್ಮೋತ್ಸವವೆನಿಸಿಕೊಳ್ಳುತ್ತದೆ. ಇವಲ್ಲದೆ ಕಾರ್ತಿಕಮಾಸದ ಕೈಶಿಕ ಏಕಾದಶಿ (ರಾಕ್ಷಸ ಬ್ರಹ್ಮೋತ್ಸವ), ಮುಕ್ಕೋಟಿ-ದ್ವಾದಶಿ (ದೈವಬ್ರಹ್ಮೋತ್ಸವ) ಮತ್ತು ರಥಸಪ್ತಮಿ (ಆರ್ಷ ಬ್ರಹ್ಮೋತ್ಸವ) ಈ ದಿನಗಳಲ್ಲೂ ಬ್ರಹ್ಮೋತ್ಸವವೇ ನಡೆಯುವುದೆಂದು ಎಣಿಕೆ.



# ಮೊದಲಾಳ್ವಾರರು ತಿರುಮಲೆ

---ಎಂ. ಆರ್. ನರಸಿಂಹನ್.

ಈ ಮೂವರು ಆಳ್ವಾರ್‌ಗಳು ವರ್ಣಿಸಿರುವ ಶೈಲಿ ವಿಲಕ್ಷಣವಾದದ್ದು, ಹಲವಾರು ವಸ್ತು ವಿನ್ಯಾಸಗಳಿಂದ ಕೂಡಿದ್ದು, ಇವುಗಳಲ್ಲಿ ಕೇವಲ ವಿಷ್ಣು ಭಕ್ತಿ, ಶರಣಾಗತಿ, ಪ್ರಪತ್ತಿ, ದೇವನ ಲೀಲಾ ವೈಭವ ಮುಂತಾದ ವಿಷಯಗಳನ್ನು ನಾವು ಕಾಣುವುದಕ್ಕಿಂತ ಮಿಗಿಲಾದ ಪ್ರಕೃತಿ ವರ್ಣನೆ, ವೇಂಗಡದ ಮೇಲಿನ ಅದ್ಭುತ ದೃಶ್ಯ ಜನಜೀವನ, ಪ್ರಾಣಿ ವೈಭವ, ವನ್ಯಜೀವಿಗಳೊಡನೆ ಮಾನವನ ಸಹ ಬಾಳ್ವೆ, ಅವುಗಳಿಂದ ರಕ್ಷಣೆಯ ಉಪಾಯಗಳು, ಜನರ ನಾಗರಿಕತೆ ಮುಂತಾದ ಮಜಲುಗಳನ್ನು ಕಾಣಬಹುದಾಗಿದೆ. ಈ ಮೂರು ಆಳ್ವಾರುಗಳಲ್ಲಿ ವೇಂಗಡದ ನಿಸರ್ಗ ಸೌಂದರ್ಯವನ್ನು ನಮ್ಮ ಮುಂದೆ ತೆರೆದಿಡಲು ಮೂರನೆಯ ಆಳ್ವಾರರು ಅತಿ ಸಮರ್ಥರು ಎಂದು ನಾವು ತೀರ್ಮಾನಿಸಬಹುದು. ಇವರ ಪಾಶುರಗಳು ಅಲಂಕಾರಿಕವಾಗಿದೆ. ಆದರೆ ಅಷ್ಟೊಂದು ಅಲಂಕಾರಗಳನ್ನು ಬಳಸದವರು ಮಧ್ಯದ ಪೂದತ್ತಾಳ್ವಾರ್ ಅವರು. ಮೊದಲನೆಯ ಆಳ್ವಾರ್ ಅವರ ವರ್ಣನೆ ಮೂರನೆಯವರಷ್ಟು ಅಬ್ಬರವಿಲ್ಲದಿದ್ದರೂ ಅವರೂ ರಸಿಕರೇ ಎಂದು ಹೇಳಲು ಸಾಕಷ್ಟು ಪರಿಕರಗಳು ಇವೆ. ಎರಡನೆಯ ಆಳ್ವಾರ್ ಹಿಂದೆ ಬಿದ್ದಿಲ್ಲ. ಕಡೆಯ ಎರಡು ಪಾಶುರಗಳೇ ಸಾಕು ಅವರ ರಸಿಕತೆಯನ್ನು ಪ್ರಕಾಶಪಡಿಸಲು. ಅಂತೂ ಮೂವರು ಆಳ್ವಾರರಿಗೂ ಆನೆಗಳು, ಬಿದಿರು ಕಾಡುಗಳು ವರ್ಣನೆಗೆ ನಿಲುಕುವ ವಸ್ತುಗಳಾಗಿವೆ.

ಮತ್ತೆ ಭಕ್ತಿವರ್ಣನೆಯ, ಪರಮಾತ್ಮನ ವಿಚಾರಗಳನ್ನು ಅಭಿವ್ಯಕ್ತಮಾಡಲು ಉಪಯೋಗಿಸಿರುವ ವಿನ್ಯಾಸ, ಶೈಲಿ, ವಿಚಾರ ಮೂವರಲ್ಲೂ ಒಂದೇ ರೀತಿಯದು. ಮೂವರೂ ಮಾತನಾಡಿಕೊಂಡೇ ಬರೆದಿರುವಂತಿದೆ. ಇಲ್ಲಿ ಒಬ್ಬರ ವಿಚಾರ ಸರಣಿಯನ್ನೇ ಮತ್ತೊಬ್ಬರು ದ್ವಿಪ್ರತಿ ಮಾಡಿದಂತಿದೆ. ವಿಶೇಷವೇನೂ ಕಂಡುಬರುವುದಿಲ್ಲ.

ಪೊಯ್ಗಯ್ ಆಳ್ವಾರ್ ಪ್ರಕೃತಿ ಚಿತ್ರ ಇಂತಿದೆ. ಆನೆಗಳನ್ನು ಹಿಡಿಯಲು ಕುರವರು ಮಾಣಿಕ್ಯಗಳನ್ನು ಎಸೆಯುವರಂತೆ. ಅವು ಸೂರ್ಯ ಪ್ರಕಾಶಕ್ಕೆ ಫಳಕ್ಕನೆ ಮಿಂಚಿದಾಗ ಮಳೆಗಾಲದ ಮಿಂಚೋ ಎಂಬ ಭ್ರಾಂತಿಯಿಂದ ಹಾವುಗಳು ಹೆದರಿ ಹುತ್ತವನ್ನು ಸೇರಿಕೊಳ್ಳುವುವಂತೆ! ಹೊಲವನ್ನು ಕಾಯಲು ಪಂಜು ಹಿಡಿದು ಕುಳಿತ ಕುರವರು ಬಿಲ್ಲುಬಾಣಗಳಿಂದ ಸಜ್ಜಾಗಿಯೂ ಕಾದಿರುತ್ತಾರೆ. ಆನೆಗಳು ಬಂದೇಬರುತ್ತವೆ. ಕುರವರ ಪಂಜು ಕಂಡು ಭಯದಿಂದ ಓಡುತ್ತವೆ. ಎದುರಿನ ಆಗಸದಲ್ಲಿ ಉಲ್ಕೆಯೊಂದು ಬೀಳುತ್ತವೆ. ಆನೆಗಳು ಕುರವರು ತಮ್ಮತ್ತ ಎಸೆದ ದೊಂದಿ ಮೇಲೆರಗುತ್ತಿದೆಯೆಂದು ಚೆಲ್ಲಾಪಿಲ್ಲಿಯಾಗಿ ಮತ್ತೊಂದು ದಿಕ್ಕಿಗೆ ಓಡುತ್ತವೆ. ಇವು ಒಂದು ತೆರನಾದ ವರ್ಣನೆಯಾದರೆ ಮತ್ತೊಂದು ಸುಂದರ ವರ್ಣನೆ ಈ ರೀತಿ ಇದೆ. ಕತ್ತಿಯ ಮೊನೆಯ ತೀಕ್ಷ್ಣ ದೃಷ್ಟಿಯ (ಚಂಚಲ ನೇತ್ರದ) ಸ್ತ್ರೀಯರು ದ್ವಾದಶಿಯ ಜಾತ್ರೆಗೆಂದು ಫಲ ಪುಷ್ಪಾದಿಗಳೊಡನೆ ಸಜ್ಜಾಗಿ ಬಂದು ದೇವರಿಗೆ ಹಾಕಿದ ಧೂಪದ ಹೊಗೆ ಗಗನವನ್ನೆಲ್ಲಾ ಆಕ್ರಮಿಸಿ ನಕ್ಷತ್ರಗಳನ್ನೂ ಮುಚ್ಚಿಬಿಡುವುದಂತೆ! 'ಪೂದತ್ತಾಳ್ವಾರ್' ವರ್ಣನೆಗಳಲ್ಲಿ ಬಿದಿರು ಕಾಡಿನ ವರ್ಣನೆಯಿದೆ. ತೋಟ, ಜಲಪಾತ, ಕಾಲುವೆ, ಝುರಿಗಳ ಸಂಭ್ರಮವಿದೆ. ತಪಸ್ವಿಗಳು ಯೋಗ ಭಂಗಿಯಲ್ಲಿ ಅಲುಗಾಡದೆ ನಿಂತಾಗ ಅವರು ಒಂದು ದೆಟ್ಟವೆಂದು ತಿಳಿದ ಹೂ ಬಳ್ಳಿಗಳು ಅವರನ್ನು ಸುತ್ತಿ ಬಳಸಿ ತಲೆಗಳನ್ನೂ ಮುಚ್ಚಿ ಹೂ ಬಿಡಲು ಆರಂಭಿಸುತ್ತವೆ. ಅವರೂ ಆ ಯೋಗಿಗಳಿಗೆ ಅವರ ಪರಿವೆಯೇ ಇರುವುದಿಲ್ಲವಂತೆ! ಬ್ರಾಹ್ಮಿ ಮುಹೂರ್ತದಲ್ಲಿ ಎದ್ದ ಕಪಿಗಳು ತೀರ್ಥದಲ್ಲಿ ಮಿಂದು ಆಗ ಅರಳುವ ಹೂವನ್ನು ತಿರಿದು ತಂದು ಸ್ವಾಮಿಗೆ ಅರ್ಚಿಸುವುವಂತೆ! ಹೆಣ್ಣಾನೆಯ ಒಲವನ್ನು ಗಳಿಸಲು ಗಂಡಾನೆ ಪಸಿರು ಬಿದಿರನ್ನು ಸಣ್ಣಗೆ ಕಡಿದು ಜೇನಿನಲ್ಲಿ ಅದ್ದಿ ಅದಕ್ಕೆ ನೀಡುತ್ತಾ ಆನಂದಪಡುವುವಂತೆ!

ಪೇಯಾಳ್ವಾರ್ ಅವರ ಪ್ರಕಾರ ಚಂದ್ರನು ಪರ್ವತ ಶಿಖರದ ಹತ್ತಿರವೇ ಬರುತ್ತಾನೆ. ಅವರಿಗೂ ಜಲಪಾತ ಗಿರಿಯ ಝುರಿ ಇವುಗಳಿಂದ ಸಂತೋಷವೇರ್ಪಟ್ಟಿವೆ. ಇವರೂ ಆನೆಯ ಆಟಗಳಿಗೆ ಮಾರುಹೋಗಿದ್ದಾರೆ. ಮದವೇರಿದ ಆನೆ ಹೆಣ್ಣಾನೆಯೊಂದಿಗೆ ಕ್ರೀಡಿಸಿದ ನಂತರ ಏಕೋ ಏನೋ ಕಲಹ ಮಾಡಿ ಅದರಿಂದ ಬೇರ್ಪಟ್ಟು ಅಲೆಯುತ್ತಿರುತ್ತದೆ. ಆ ಕೋಪದಲ್ಲಿ ಎದುರಿನ ಪರ್ವತದ

ರತ್ನಮಯ ಭಿತ್ತಿಯಲ್ಲಿ ಅದರ ಪ್ರತಿಬಿಂಬ ಕಾಣಲು ಅದೊಂದು ಬೇರೆಯ ಆನೆ - ತನ್ನ ಪ್ರತಿಸ್ಪರ್ಧಿ ಎಂಬುದಾಗಿ ಭಾವಿಸಿ ಅದರೊಡನೆಯೇ, ಸೆಣೆಸಲಾರಂಭಿಸುತ್ತದೆ. ಕೋಪದಿಂದ ತನ್ನ ಕೊಂಬನ್ನು ಎದುರಿನ ಆನೆಯನ್ನು ಇರಿಯುವೆನೆಂಬ ಭಾವದಿಂದ ಕೋಡಿಗೆ ಚುಚ್ಚುತ್ತದೆ. ಆ ಘರ್ಷಣೆಯಿಂದ ಎದುರಿನ ರತ್ನಭಿತ್ತಿಯಿಂದ ಮುತ್ತು ಮಣಿಗಳು ಕೆಳಗೆ ಚೆಲ್ಲಾಡುವುವಂತೆ! ಹೆಣ್ಣುಕಪಿಯೊಂದು ತನ್ನ ಪ್ರಿಯನನ್ನು ಪ್ರಣಯಾಲಾಪಗಳ ನಡುವೆ ಆಕಾಶದಲ್ಲಿನ ಚಂದ್ರನು ಕನ್ನಡಿಯಂತೆ ತೋರಲು ಅದನ್ನು ತಂದುಕೊಡದೇಕೆಂದು ಬಲಾತ್ಕರಿಸುತ್ತದೆ. ರಾಮನನ್ನು ಸೀತೆಯು ಜಿಂಕೆಗಾಗಿ ಯಾಚಿಸಿದಂತೆ! ಮದಜಲವು ಗಂಡಸ್ಥಳದಿಂದ ಧಾರಾಕಾರವಾಗಿ ಸುರಿಯಲು ಅದನ್ನೇ ಝುರಿಯ ನೀರೆಂದು ಭಾವಿಸಿ ಆನೆ ಬಾಯಿ ಮುಕ್ಕಳಿಸಿ ಕಾಲು ತೊಳೆದು ಶುಚಿರ್ಭೂತವಾಗಿ ಕೊಳದಿಂದ ಅರಳುವ ಹೂವನ್ನು ಕಿತ್ತು ನಿಷ್ಠ ಭಕ್ತನಂತೆ ದೇವರಿಗೆ ಅರ್ಪಿಸುವ ದೃಶ್ಯ ನಿಜಕ್ಕೂ ಮನೋಜ್ಞ! ಮತ್ತೊಂದು ಆನೆಯು ಕಾರ್ಮೇಘವನ್ನು ತನ್ನ ಪ್ರತಿಸ್ಪರ್ಧಿಯೆಂದು ಬಗೆದು ಅದನ್ನು ಗುದ್ದಲು ಮೋಡವು ಕರಗಿದಾಗ ತನ್ನ ಎದುರಾಳಿ ಸೋತನೆಂಬ ವಿಜಯೋನ್ಮಾದದಿಂದ ಘೀಳಿಡಲು ಅದರ ದಂತ ಫಳಕ್ಕನೆ ಹೊಳೆಯಲು ಆ ಸಮ

ಆಳ್ವಾರ್‌ಗಳು ತಿರುಮಲೆಯ ಬಗ್ಗೆ ಹಾಡಿದ ಮೊದಲಿಗರಲ್ಲಿ ಪ್ರಮುಖರು ಎನ್ನಬೇಕು. ಅವರಿಗಿಂತ ಮೊದಲು ಸ್ವಾಮಿಯನ್ನು ಕುರಿತು ಉಲ್ಲೇಖಗಳಿದ್ದರೂ ಹಾಡಿದವರಿಲ್ಲ. ಹೀಗಾಗಿ ಆಳ್ವಾರರುಗಳ ಕಾಲ ಸೂಚನೆಯಷ್ಟೇ ಅಲ್ಲದೆ ತಿರುಮಲೆಯ ಬಗೆಗಿನ ಸಾಹಿತ್ಯಾಧಾರವೂ ಈ ಪಾಶುರಗಳಿಂದ ತಿಳಿದು ಬರುವ ಚಾರಿತ್ರಿಕ ಅಂಶವೆಂಬುದು ಮುಖ್ಯವಾಗುತ್ತದೆ. ಶ್ರೀ ಎಂ. ಆರ್. ನರಸಿಂಹನ್ ಅವರು ವಿದ್ವಾಂಸರು ಮಿಗಿಲಾಗಿ ಭಕ್ತರು. ಅವರು ಬರೆದ ಆಳ್ವಾರ್‌ಗಳು ಕಂಡ ತಿರುವೇಂಗಡ ಪುಸ್ತಕದಿಂದ ಮೊದಲಿನ ಮೂವರು -- ಪೊಯ್ಗಯ್, ಪೂದತ್ತಾಳ್ವಾರ್, ಪೇಯಾಳ್ವಾರ್ ಅವರುಗಳು ತಿರುಮಲೆಯನ್ನು ಕಂಡ ಬಗೆಯನ್ನು ಉದ್ಧರಿಸಿ ನೀಡಲಾಗಿದೆ.

ಯವನ್ನೇ ಹೊಂಚುಹಾಕುತ್ತಿದ್ದ ಶರಭವು ಮೇಲಿನಿಂದ ಎರಗಿ ಆನೆಯನ್ನು ಕೊಂದು ಸಾಯಿಸುವುದಂತೆ! ಸುಂದರ ಕುರವ ಸ್ತ್ರೀಯರು ದೇವರನ್ನು ಸೇವಿಸಲು ವೇಂಗಡವನ್ನು ಸೇರಿದಾಗ ಅವರು ಪ್ರಾಣಿಗಳ ಉಪಟಳದಿಂದ ಪಾರಾಗಲು ತಂದಿರುವ ಬಿರುಕೋಲುಗಳು ಗಗನಕ್ಕೆ ಸೋಕಿ ಚಂದ್ರನನ್ನು ಹಿಡಿಯಲು ಬಂದ ರಾಹುವನ್ನು ಚುಚ್ಚುವುದಂತೆ. ಇದರಿಂದ ಕಂಗೆಟ್ಟ ರಾಹುವು ಓಡಿದಾಗ ಚಂದ್ರನು ಸಂತೋಷದಿಂದ ಮತ್ತೂ ಕಾಂತಿಯಿಂದ ಬೆಳಗುವನಂತೆ! ಇದು ಚಂದ್ರನ ವರ್ಣನೆಯಾದರೆ ಸೂರ್ಯನ ವರ್ಣನೆ ಬೇಡವೆ? ನಮ್ಮ ಸಮಸ್ಯೆಯನ್ನು ಎದುರು ನೋಡಿಯೇ ಆಳ್ವಾರ್ ಅದನ್ನೂ ಸಿದ್ಧಪಡಿಸಿಕೊಂಡಿರುತ್ತಾರೆ. ಸೂರ್ಯನು ತನ್ನ ತೇರಿನಲ್ಲಿ ಪ್ರತಿಷ್ಠೆಯೊಡನೆ ಬರುವಾಗ ಎದುರಿಗೆ ತಿರುಮಲೆಯ ಶಿಖರ, ಮೇಲಿನ ದೇಗುಲವನ್ನು ಕಾಣುತ್ತಾನೆ. ಅವನಿಗೆ ದೇವನಲ್ಲಿ ಭಕ್ತಿ ಉತ್ಪನ್ನವಾಗಿ ತನ್ನ ಗರ್ವವನ್ನು ಒತ್ತಟ್ಟಿಗೆ ಅಟ್ಟಿ ಭಕ್ತನ ಸೌಲಭ್ಯ ಗುಣದಿಂದ ತನ್ನ ತೇರನ್ನು ದೇವರಿಗೆ ಬಲಗೊಂಡು ಹೋಗುವಂತೆ ಏರ್ಪಾಡು ಮಾಡುತ್ತಾನೆ! ಇದೊಂದು ಮನೋಜ್ಞ ಭಾವನೆಯೇ ಸರಿ! ಸಾಣೆಯ ಕಲ್ಲಿಗೆ ಕಬ್ಬಿಣದ ಸಲಕರಣೆ ಸೋಕಿದಾಗ ತೇಯುವಂತೆ ವೇಂಗಡದ ಶಿಖರದ ಕೋಡಿಗೆ ಪೂರ್ಣಚಂದ್ರನು ಸೋಕಿ ಸ್ವಲ್ಪವಾಗಿ ಕರಗುತ್ತಾನೆ. ಕೆಳಗೆ ಇಳಿಯುವ ಚಂದ್ರ ಹಿರಿಯದಾಗಿ ಕಾಣುವುದು ಸಹಜ ಪ್ರಾಕೃತಿಕ ವ್ಯಾಪಾರ ತಾನೆ. ಅದರ ಒಡಲಿನಲ್ಲಿನ ಜಿಂಕೆಯ ಗುರುತೂ ಕೂಡ ದೊಡ್ಡದಾಗಿ ಕಾಣುತ್ತದೆ. ಪರ್ವತಾಗ್ರದಲ್ಲಿ ಹಸಿದು ಕಂಗೆಟ್ಟ ಹುಲಿಯು ಜಿಂಕೆಯನ್ನು ಕಂಡು ತನಗೆ ಆಹಾರ ದೊರಕಿದ ಸಂತೋಷಕ್ಕೆ ಗರ್ಜಿಸುತ್ತಾ ಮೈಮುರಿದು ಮೇಲೇಳುತ್ತದೆ. ದೆಟ್ಟದ ಮೇಲೆ ದಟ್ಟವಾಗಿ ಹಬ್ಬಿರುವ ವೇಂಗೈ ಪುಷ್ಪದ ನರುಗಂಪು ಆ ಪ್ರಾಂತ್ಯವನ್ನೆಲ್ಲಾ ಆವರಿಸಿರುತ್ತದೆ. ಬೇರು ತಿನ್ನಲು ಬಂದ ಕಾಡು ಹಂದಿಗಳು ನೆಲವನ್ನೆಲ್ಲಾ ಕೆದಕಲು ನೆಲವು ಉತ್ತು ಬಿತ್ತಿದಂತೆ ಆಗುವುದಲ್ಲದೆ ಅದರೊಳಗೆ ಅಡಗಿದ್ದ ಬಿದಿರು ಕಡ್ಡಿಗಳು ಬೇರಿನೊಂದಿಗೆ ಮೇಲೆ ಬೀಳುತ್ತದೆ. ಈ ಉತ್ತ ನೆಲಕ್ಕೇ ವೃದ್ಧ ಕುರವರು ಕಾಳುಗಳನ್ನು ಚೆಲ್ಲಿ ಬೆಳೆಯನ್ನು ತೆಗೆಯುತ್ತಾರೆ. ಈ ಧಾನ್ಯದ ಬೆಳೆ, ನೆಲ ಕಚ್ಚಿ ಬೆಳೆದ ಬಿದಿರು ಮೆಳೆಗಳ ಮಧ್ಯೆ ಕಂಗೊಳಿಸುತ್ತದೆ.

ಇಂತಹ ಸುಂದರ ಚಿತ್ರಗಳನ್ನು ಇದರ ಮಧ್ಯೆ ಭಕ್ತಿ ಪುಷ್ಪಗಳಿಂದ ಸಂಭ್ರಮಿಸುವ ವೇಂಗಡದೊಡೆಯನನ್ನು ಕಂಡೇ ರಾಮಾನುಜರು ಈ ಆಳ್ವಾರ್ ಪಾಶುರಗಳಿಂದ ಪರವಶರಾಗಿ 'ಶೆಂದಮಿಳ್ ಪಾಡುವಾರ್ ವಣಂಗುಂ ದೈವಂ' ಎಂದು ಉದ್ಗಾರ ಹೊರಡಿಸಿದ್ದರಲ್ಲಿ ಆಶ್ಚರ್ಯವೇನು? ಇಂತಹ ಸುಂದರ ಪಾಶುರಗಳನ್ನು ದೇವಸ್ಥಾನದ ಅಧ್ಯಯನೋತ್ಸವದಲ್ಲಿ ಪ್ರಥಮವಾಗಿ ಅನುಸಂಧಾನ ಮಾಡಲು ಏರ್ಪಾಡು ಮಾಡಿದ್ದರಲ್ಲಿ ವಿಶೇಷವೇಕಿಲ್ಲ?

ಈ ಮೂವರ ಕಾಲಕ್ಕೆ ತಿರುವೇಂಗಡವು ಸುಸಂಸ್ಕೃತ ಸ್ಥಿತಿಯಲ್ಲಿ ಮುಂದುವರಿದಿತ್ತು. ಮೊದಲನೇ ಆಳ್ವಾರ್ ಮೂರನೆಯ ಆಳ್ವಾರ್ ವನ್ಯಮೃಗಗಳನ್ನು ವಿವರಿಸಿದ್ದಾರೆ. ಎರಡನೆಯ ಆಳ್ವಾರ್ ಬರಿಯ ಬಿದಿರುಮಳೆ, ಕಪಿಗಳನ್ನು ಮಾತ್ರ ವಿವರಿಸಿದ್ದಾರೆ. ಆನೆಯ ಒಂದು ಪಾಶುರವಿದೆ. ಮೊದಲನೆಯ ಆಳ್ವಾರ್ ಕಾಲಕ್ಕೆ ಆನೆಯನ್ನು ಹಿಡಿಯುವ ಕುರವರು ಆನೆಯಿಂದ ತಮ್ಮನ್ನೂ ತಮ್ಮ ಪೈರುಪಚ್ಚೆಗಳನ್ನೂ ರಕ್ಷಿಸುವ ಸಾಹಸದ ವಿವರಣೆಯಿದೆ, ಎರಡನೆಯ ಆಳ್ವಾರ್ ಕಾಲಕ್ಕೆ ವೇಂಗಡದ ಮೇಲೆ ತೋಟಗಳೂ, ಕಾಲುವೆಗಳೂ ಇರುವ ವಿವರಣೆ ಇದೆ. ಇದನ್ನು ಕಂಡಾಗ ಮೂರನೆಯವರು ಮತ್ತು ಮೊದಲನೆಯವರು ಮೊದಲು ತಿರುವೇಂಗಡವನ್ನು ದರ್ಶಿಸಿದ್ದರು. ಅವರ ಕಾಲದಲ್ಲಿ ಇನ್ನೂ ಜನ ಪ್ರಾಣಿಗಳಿಂದ ರಕ್ಷಣೆ ಹೊಂದಲು ಕಷ್ಟಪಡುತ್ತಿದ್ದರು. ಇನ್ನೂ ಕಾಡಾಗಿಯೇ ಇದ್ದಕಾಲ. ಆದರೆ ಎರಡನೆಯ ಆಳ್ವಾರ್ ಕಡೆಯದಾಗಿ ವೇಂಗಡಕ್ಕೆ ಬಂದವರು. ಈ ವಿಚಾರಗಳಲ್ಲಿ ಸಾಕಷ್ಟು ಸುಧಾರಿತ ಪರಿಸ್ಥಿತಿಯನ್ನು ಕಂಡಿದ್ದರು. ಅವರ ಕಾಲಕ್ಕೆ ವೇಂಗಡದಲ್ಲಿ ಕಾಡು ತರಿಯಲ್ಪಟ್ಟು ಜನ ನೆಮ್ಮದಿಯ ಬಾಳನ್ನು ಕಾಣಲು ತೊಡಗಿದ್ದರು ಎಂಬುವುದು ಈ ತಿರುವಂದಾದಿಗಳಿಂದ ಕಂಡುಬರುವ ಅಂಶ. ಈ ಎರಡನೆಯ ಆಳ್ವಾರ್ ತಮ್ಮ ಪ್ರಬಂಧದಲ್ಲಿ 'ಮಾಮಲ್ಲೈ' ಎಂದು ಮಹಾಬಲಿಪುರವನ್ನು ಕರೆದಿರುವುದೂ ಒಂದು ಗಮನಾರ್ಹ ವಿಚಾರವೇ ಸರಿ. ಏತಕ್ಕೆಂದರೆ ಮಾಮಲ್ಲನೆಂಬ ಬಿರುದನ್ನು ಬಳಸಿ ಪಲ್ಲವ ನರಸಿಂಹವರ್ಮನು ತನ್ನ ವಿಜಯೋತ್ಸವದ ಸೂಚಕವಾಗಿ ಮಹಾಬಲಿಪುರವನ್ನು ಮಾಮಲ್ಲಪುರವೆಂದು ಕರೆದ. ಅದಕ್ಕೆ ಮೊದಲು ಮಹಾಬಲಿಪುರಕ್ಕೆ ಈ ಹೆಸರು ಇರಲಿಲ್ಲ. ನರಸಿಂಹವರ್ಮನ ಕಾಲ ಕ್ರಿ.ಶ. ೬೩೦ ರಿಂದ ೬೬೮. ಆದ್ದರಿಂದ ಪೂದತ್ತಾಳ್ವಾರ್ ಕಾಲ ನರಸಿಂಹವರ್ಮನ ಕಾಲವೋ, ಇಲ್ಲ ಅವನ ನಂತರದ್ದೋ ಇರಬೇಕೆಂಬುದಾಗಿ ಊಹಿಸಲು ಸಾಧ್ಯವಾಗುತ್ತದೆ. ಮೊದಲು ಮತ್ತು ಮೂರನೆಯವರ ಕಾಲ ಇದಕ್ಕೆ ಮೊದಲೋ ಅಥವಾ ಇದೇ ಸಮಯವೋ ಎಂದು ಕಲ್ಪಿಸಬಹುದು. ಆದರೆ ಎರಡನೆಯ ಆಳ್ವಾರ್ ತಿರುಮಲೆಯನ್ನು ದರ್ಶಿಸಿದಾಗ ಮೊದಲನೆಯ ಮತ್ತು ಮೂರನೆಯ ಆಳ್ವಾರ್ ತಿರುಮಲೆಯನ್ನು ದರ್ಶಿಸಿ ಬಹಳ ಕಾಲವೇ ಆಗಿತ್ತು ಎಂಬುವುದು ಮೇಲಿನ ಪಾಶುರಗಳಿಂದ ಕಂಡು ಬರಬಹುದಾದ ವಿಚಾರ.

(-ಆಳ್ವಾರ್‌ಗಳು ಕಂಡ ತಿರುವೇಂಗಡ-ಕೃತಿಯಿಂದ)



## ಕುಲಶೇಖರರ ಅಪೇಕ್ಷೆ

ಶೆಡಿಯಾಯ್ ವಲ್ ವಿನೈಗಳ್ ತೀಕುಣತಿರುಮಾಲೇ

ನೆಡಿಯಾನೇ ವೇಂಗಡವಾ ನಿನ್ ಕೋಯಿಲಿನ್ ವಾಶಲ್
ಅಡಿಯಾರುಂ ವಾನವರುಂ ಅರುಂಬೆಯರುಂ ಕಿಡಂದಿಯಂಗುಂ
ಪಡಿಯಾಯ್ ಕಿಡಂದುನ್ ಪವಳ ವಾಯ್ ಕಾಣ್ಬೇನೆ

ಪೆರುಮಾಳ್ ತಿರುಮೊಳಿ.

ತನ್ನ ತಿರುವಡಿಗಳಲ್ಲಿ ತಲೆಬಾಗಿಸಿದ ಭಕ್ತರ ಪಾಪ ಫಲವಾದ ಸಂಸಾರ ಸಂಬಂಧಗಳನ್ನೆಲ್ಲಾ ಕತ್ತರಿಸಿ ಹಾಕಿಬಿಡುವ ಪರಮಾತ್ಮನೆ! ಆಶ್ರಿತರ ವಿಷಯದಲ್ಲಿ ಆಸಕ್ತಿಯುಳ್ಳವನೆ! ವೇಂಗಡದವನೆ! ನಿನ್ನ ಗುಡಿಯ ಬಾಗಿಲಿನಲ್ಲಿ ನಮ್ಮಂಥವರೂ, ಬಾನವರೂ, ಅಪ್ಸರೆಯರೂ ದರ್ಶನಕ್ಕೆ ಬಂದಾಗ ಅವರ ಪಾದಸ್ಪರ್ಶನಕ್ಕೆ ಒಳಪಡುವಂತಹ ಹೊಸ್ತಿಲಾಗಿ ಇದ್ದುಕೊಂಡು ನಿನ್ನ ಹವಳದಂತಹ ಬಾಯನ್ನು ಕಾಣುತ್ತೇನೆಯೇ?

ಎಂ. ಆರ್. ನರಸಿಂಹನ್ ಅವರ ಅನುವಾದ.

# ತಿರುಪತಿಯಲ್ಲಿ ಶ್ರೀಕೃಷ್ಣದೇವರಾಯ

---ದಿ|| ಎನ್. ಅನಂತರಂಗಾಚಾರ್.

ಕರ್ನಾಟಕ ರಾಜ್ಯರಮಾರಮಣನಾದ ಕೃಷ್ಣದೇವರಾಯನು ಉಚ್ಛ್ರವೈಷ್ಣವ ಭಕ್ತ. ಅವನಿಂದ ರಚಿತವಾದ 'ಆಮುಕ್ತಮಾಲ್ಯದ' ಮತ್ತು ಅವನ ಆಸ್ಥಾನವಿದ್ವನ್ಮಣಿಯಾದ ಅಲ್ಲಸಾನಿ ಪೆದ್ದನನ 'ಮನುಚರಿತ್ರೆ' ಇವುಗಳ ಆಧಾರದ ಮೇಲೆ ಅವನು ಶ್ರೀವೈಷ್ಣವ ಸಂಪ್ರದಾಯಿ ಎಂದು ವಿಶದ ಪಡುವುದು. ಅವನಿಗೆ ತಿರುಮಲೆಯ ವೆಂಕಟೇಶನಲ್ಲಿ ಅವಿಚ್ಛಿನ್ನ ಭಕ್ತಿ. ಸಾಮಾನ್ಯವಾಗಿ ವಿಜಯನಗರದ ಸಾಳುವ, ತುಳುವ ಮತ್ತು ಅರವೀಡು ಮನೆತನದ ಎಲ್ಲ ರಾಜರುಗಳಿಗೂ ತಿರುವೇಂಗಡ ಸ್ವಾಮಿಯಲ್ಲಿ ಅಪಾರವಾದ ಭಕ್ತಿ. ಆದುದರಿಂದ ಅವರು ವೆಂಕಟೇಶನನ್ನು ತಮ್ಮ ಕುಲದೈವವೆಂದು ಭಾವಿಸಿ ಅವಕಾಶ ಸಿಕ್ಕಿದ ಹಾಗೆಲ್ಲ ಅವನಿಗೆ ಅನೇಕ ವಿಧವಾದ ಸೇವೆಗಳನ್ನು ಸಲ್ಲಿಸಿದ್ದಾರೆ. ಇವರೆಲ್ಲರಲ್ಲೂ ಕೃಷ್ಣದೇವರಾಯನಿಗೂ ತಿರುಮಲೆಗೂ ಇದ್ದ ಸಂಬಂಧ ಇನ್ನೂ ನಿಕಟವಾದುದು. ಅವನು ತನ್ನ ಎಲ್ಲ ವಿಜಯಯಾತ್ರೆಗಳ ಪ್ರಾರಂಭದಲ್ಲಿಯೂ, ಅಂತ್ಯದಲ್ಲಿಯೂ ತಿರುಪತಿಗೆ ಬಂದು ವೆಂಕಟೇಶನಿಗೆ ವಿವಿಧ ರೀತಿಯ ಸೇವೆಗಳನ್ನು ಸಲ್ಲಿಸಿದ್ದಾನೆ. ಅವನಿಗೆ ತಿರುಮಲದೇವಿ ಮತ್ತು ಚೆನ್ನಾಜಿದೇವಿ ಎಂಬ ಇಬ್ಬರು ರಾಣಿಯರಿದ್ದರು. ಇವರು ಸಾಮಾನ್ಯವಾಗಿ ಕೃಷ್ಣದೇವರಾಯನು ತಿರುಮಲೆಗೆ ಸಂದರ್ಶನಕ್ಕೆ ಹೋದಾಗಲೆಲ್ಲ ತಾವೂ ಹೋಗಿ ಅವನ ಸೇವೆಗಳ ಜೊತೆಗೆ ತಾವು ವಿವಿಧ ರೀತಿಯ ಕಾಣಿಕೆಗಳನ್ನು ಸಲ್ಲಿಸಿದ್ದಾರೆ. ಅವೆಲ್ಲ ತಿರುಮಲೆ ದೇವಸ್ಥಾನದಲ್ಲಿ ಉಪಲಬ್ಧವಾಗಿರುವ ಶಾಸನಗಳಲ್ಲಿ ಸ್ಪಷ್ಟವಾಗಿ ಲಿಖಿತವಾಗಿವೆ. ಆ ಸಂದರ್ಭದಲ್ಲಿಯೇ ಅದೇ ಶಾಸನಗಳಲ್ಲಿ ಕೃಷ್ಣದೇವರಾಯನ ವಿಜಯ ಯಾತ್ರೆಯ ಅನೇಕ ವಿವರಗಳು ಉಕ್ತವಾಗಿರುವುದರಿಂದ ಅವುಗಳು ಐತಿಹಾಸಿಕ ದೃಷ್ಟಿಯಿಂದ ಬಹು ಉಪಯುಕ್ತವಾಗಿವೆ. ಕೃಷ್ಣದೇವರಾಯನು ಅವನ ಆಳ್ವಿಕೆಯ ಪ್ರಾರಂಭದ ವರ್ಷಗಳಲ್ಲಿ ಏಳುಸಲ ತಿರುಪತಿಗೆ ಬಂದು ದೇವರ ದರ್ಶನ ಮಾಡಿಕೊಂಡು ಹೋಗಿದ್ದಾನೆ.

ತಿರುಮಲೆ ದೇವಸ್ಥಾನದ ೫೦ ಶಾಸನಗಳಲ್ಲಿ ಕೃಷ್ಣದೇವರಾಯನು ಸೂಚಿತನಾಗಿದ್ದಾನೆ. ಅವುಗಳ ಕಾಲ ಕ್ರಿ.ಶ. ೧೫೧೩ ರಿಂದ ೧೫೨೪ ರ ಮಧ್ಯಭಾಗ. ಅನೇಕಸಲ ಆ ಶಾಸನಗಳಲ್ಲಿ ಅವನೊಡನೆ ಅವನ ಇಬ್ಬರು ರಾಣಿಯರೂ ನಿರ್ದೇಶಿತರಾಗಿದ್ದಾರೆ. ಆ ಶಾಸನಗಳಲ್ಲೆಲ್ಲಾ ಅವರ ಸೇವೆಗಳು ಬಹುವಿವರವಾಗಿ ಉಕ್ತವಾಗಿವೆ. ತನ್ನ ಆಧಿಪತ್ಯದಲ್ಲಿದ್ದ ಆ ಎಲ್ಲ ರಾಜ್ಯದವರುಗಳಿಗೂ ಅದು ಸ್ಪಷ್ಟವಾಗಿ ತಿಳಿಯದೇಕೆಂದು ಕೃಷ್ಣದೇವರಾಯನು ತನ್ನ ಶಾಸನಗಳನ್ನು ತಮಿಳು, ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ ಪ್ರಕಟಿಸಿದ್ದಾನೆ.

ಕೃಷ್ಣದೇವರಾಯನು ತನ್ನ ಇಬ್ಬರು ರಾಣಿಯರೊಡನೆ ತಿರುವೆಂಕಟನಾಥನನ್ನು ಮೊದಲನೆಯ ಸಲ ಸಂದರ್ಶಿಸಿದುದು ಅಂಗಿರಸ ಸಂವತ್ಸರದ ಫಾಲ್ಗುಣ ಶು|| ೫ (ಶಕವರ್ಷ ೧೪೩೫-ಕ್ರಿ.ಶ. ೧-೨-೧೫೧೩) ಯಂದು. ಈ ಸೇವೆಯ ವಿವರವನ್ನು ತಿಳಿಸುವ ಶಾಸನವು ತಿರುಮಲೆ ದೇವಸ್ಥಾನದ ಪ್ರಾಕಾರದ ಉತ್ತರಗೋಡೆಯಲ್ಲಿದೆ. ಅದರ ವಿವರ ಹೀಗಿದೆ. 'ನವರತ್ನ ಖಚಿತವಾದ ಕಿರೀಟ, ಮೂರೆಳೆಯ ಮುತ್ತಿನ ಸರ, ಮುತ್ತಿನ ಪದಕ, ೨೫ ಆರತಿಯ ತಟ್ಟೆಗಳು. ಕಿರೀಟದಲ್ಲಿ ೧೫೫೫ ತೂಕದ ಬಂಗಾ



ಚಿನ್ನಾದೇವಿ, ಶ್ರೀ ಕೃಷ್ಣದೇವರಾಯ, ತಿರುಮಲದೇವಿ.

ರದ ಕಟ್ಟಿಡ, ೧೦೭೬ ತೂಕದ ಕುಂದಣ ಬಂಗಾರ, ೨೮೨೨ ಕೆಂಪುಗಳು, ೧೬೦ ವಜ್ರ, ೪೨೩ ಹಳೆಯ ವಜ್ರ, ಮೂರು ಮಾಣಿಕ್ಯಗಳು, ೧೦ ನೀಲಗಳು, ೧೭ ವೈಢೂರ್ಯ, ಗೋಮೇಧಿಕ ಎಲ್ಲವೂ ಸೇರಿ ೩೧೩೦ ತೂಕ. ೧೬೩ ರತಿ ತೂಗುವ ಮುತ್ತುಗಳು, ಕಟ್ಟಿಡದ ಬಂಗಾರವ ಸರಿಗೆಸರ, ಕಿರೀಟದ ಒಟ್ಟುತೂಕ ೩೩೦೮, ಮುತ್ತಿನ ಮೂಕುತಿಸರದಲ್ಲಿ ೧೩೭೦ ಜರಿ ಮುತ್ತುಗಳು, ಒಂದು ಮಾಣಿಕ್ಯ ೨ ನೀಲಮಣಿಗಳು, ೧೫ ಅಡ್ಡಿಗೆಗಳು. ಇದರ ಒಟ್ಟು ತೂಕ ೨೨೨೫ ರತಿಗಳು, ಪದಕದಲ್ಲಿ ೬ ಮುತ್ತುಗಳೂ ೬೦ ವಜ್ರಗಳೂ, ೧೧ ಪಚ್ಚೆಗಳೂ, ೩ ಮಾಣಿಕ್ಯಗಳೂ, ೫ ಕೆಂಪುಗಳೂ ಇದ್ದು ಅದರ ಒಟ್ಟು ತೂಕ ೯೧. ಕೃಷ್ಣದೇವರಾಯನ ರಾಣಿ ಚೆನ್ನಾಜಿ ಅಮ್ಮಣ್ಣೆಯವರು ತಿರುವೇಂಗಡನಾಥನ ಚೆನಪಾಲು (ಹಾಲು) ನೈವೇದ್ಯಕ್ಕೆ ೩೨ರ ತೂಕದ ಬಂಗಾರದ ಬಟ್ಟಲನ್ನೂ, ಅಂತದೇ ಅದೇ ತೂಕದ ಇನ್ನೊಂದು ಬಂಗಾರದ ಬಟ್ಟಲನ್ನು ಮಹಾರಾಣಿ ತಿರುಮಲದೇವಿಯರು ಸಮರ್ಪಿಸಿದ್ದಾರೆ.

ಅವನು ೨ನೆಯ ಸಲ ತಿರುಮಲೆಗೆ ಬಂದುದು (ಮೂರುತಿಂಗಳೊಳಗೆ) ೨-೫- ೧೫೧೩ ರಲ್ಲಿ. ಈ ಸಲ ಇವನ ರಾಣಿಯರು ಬಂದಿರಲಿಲ್ಲ. ಈಗ ಮೂಲದೇವರಿಗೆ ಕೆಲವು ತಿರುವಾಭರಣಗಳನ್ನು (ಅಂದರೆ ಉಡಿದಾರ, ಒರೆಯುಳ್ಳ ಕತ್ತಿ, ಕಠಾರಿ, ಪದಕ, ಭುಜಕೀರ್ತಿಗಳು, ಅಡ್ಡಿಕೆಗಳು - ಎಲ್ಲವೂ ಕೆಂಪು, ವಜ್ರಪಚ್ಚೆಗಳಿಂದ ಕೂಡಿದುವು) ಸಮರ್ಪಿಸಿದನು. ಉತ್ಸವದೇವರುಗಳಿಗೆ (ಮಲೈಯಪ್ಪ ಮತ್ತು ನಾಚ್ಚಿಯಾರರಿಗೆ) ಮೂರು ಕಿರೀಟಗಳೂ ಸಮರ್ಪಿತವಾದುವು.

ಅದೇವರ್ಷದ ಜೂನ್ ೧೩ ನೆಯ ತಾರೀಖಿನ ದಿನ ಕೃಷ್ಣದೇವರಾಯನು ತಿರುಮಲೆಗೆ ಮೂರನೆಯ ಸಲ ಬಂದು ವೆಂಕಟೇಶ್ವರನ ನಿತ್ಯನೈಮಿತ್ತಿಕ ನಿವೇದನಗಳಿಗಾಗಿ ಆಯ್ದು ಗ್ರಾಮಗಳನ್ನು ಧಾರಾಪೂರ್ವಕ ದಾನಮಾಡಿರುವುದಲ್ಲದೆ ತನ್ನ ತಂದೆ ನರಸನಾಯಕರ ಕ್ಷೇಮಾಭಿವೃದ್ಧಿಗಾಗಿ ತ್ರೈಮಾಸದಲ್ಲಿ ಸಂವತ್ಸರೋತ್ಸವವನ್ನೂ ಏರ್ಪಡಿಸಿದನು. ಇದನ್ನು ನಿರ್ದೇಶಿಸುವ ಶಾಸನಕ್ಕೆ ಐತಿಹಾಸಿಕ ದೃಷ್ಟಿಯಿಂದ ಬಹುಗಣ್ಯತೆಯಿದೆ. ಇದರಲ್ಲಿ ಕೃಷ್ಣದೇವರಾಯನ ಸಂಪೂರ್ಣ ವಂಶವೃಕ್ಷವು ನಿರೂಪಿತವಾಗಿದೆ. ಅಲ್ಲದೆ ಇದರಲ್ಲಿ ಕೃಷ್ಣದೇವರಾಯನಿಗೆ 'ದೋಷಕೃತಪ್ರತಿ ಪಾರ್ಥಿವ ದಂಡ', 'ಶೇಷ ಭೃತ ಕ್ಷಿತಿ ರಕ್ಷಣ ಶೌಂಡ', 'ಭಾಷೆಗೆ ತಪ್ಪುವ ರಾಯರ ಗಂಡ', 'ಅರ್ಥಿ ತೋಪಕೃತ್', 'ರಣಚಂಡ ರಾಜಾಧಿರಾಜ','ರಾಜ ಪರಮೇಶ್ವರ', 'ಮೂರು ರಾಯರ ಗಂಡ', 'ಪರ ರಾಯ ಭಯಂಕರ', 'ಹಿಂದೂರಾಜಸುರತ್ರಾಣ', 'ದುಷ್ಟ ಶಾರ್ದೂಲ ಮರ್ದನ', 'ಗಜೌಘ ಗಂಡಭೇರುಂಡ' ಮೊದಲಾದ ಬಿರುದುಗಳಿದ್ದವೆಂದು ತೋರುತ್ತದೆ.

ಕ್ರಿ.ಶ. ೧೫೧೪ ರಲ್ಲಿ ಕೃಷ್ಣದೇವರಾಯನು ಪ್ರತಾಪರುದ್ರ ಗಜಪತಿಯನ್ನು ಹಿಂಬಾಲಿಸಿ ಓಡಿಸಿ ಉದಯಗಿರಿಯನ್ನು ಸ್ವಾಧೀನ ಪಡಿಸಿಕೊಂಡು ರಾಜಧಾನಿಯಾದ ವಿಜಯನಗರಕ್ಕೆ ಹಿಂತಿರುಗುವಾಗ ನಾಲ್ಕನೆಯ ಸಲ ತಿರುಮಲೆಯನ್ನು ಸಂದರ್ಶಿಸಿದನು. ಈ ಸಲ ಅವನು ವೆಂಕಟೇಶ್ವರನಿಗೆ ಕನಕಾಭಿಷೇಕವನ್ನು ಮಾಡಿಸಿದನು. ಇದರ ಖರ್ಚಿಗಾಗಿ ೩೦,೦೦೦ ವರಹಗಳನ್ನು ದಾನ ಮಾಡಿದನು. ನಿತ್ಯ ಕೈಂಕರ್ಯಕ್ಕಾಗಿ ತಾಳ್ಲಪಾಕ ಗ್ರಾಮವನ್ನು ದಾನಮಾಡಿ ಆ ಸೇವೆಯ ಸಂದರ್ಭದಲ್ಲಿ ಸೇವಾರ್ಥಗಾರರ ಪಾಲಿಗೆ ಬರಬೇಕಾದ ನಿವೇದಿತ ಪ್ರಸಾದದಲ್ಲಿ ನಾಲ್ಕನೆಯ ಒಂದು ಭಾಗವನ್ನು ರಂಗದೀಕ್ಷಿತ, ಶಿವದೀಕ್ಷಿತ ಮತ್ತು ತಿರುಪ್ಪಾಣಿಪಿಳ್ಳೆಗೆ ಕೊಡತಕ್ಕದ್ದೆಂದೂ ಉಳಿದ ಮೂರು ಭಾಗವನ್ನು ಸತ್ರದಲ್ಲಿ ಬ್ರಾಹ್ಮಣ ಭೋಜನಕ್ಕೆ ಉಪಯೋಗಿಸತಕ್ಕದ್ದೆಂದೂ ನಿರ್ದೇಶಿಸಿದನು. ರಣರಂಗದಿಂದ ನೇರವಾಗಿ ತನ್ನೊಡನೆಯೇ ಬಂದಿದ್ದ ಚೆನ್ನಾಜಿ ದೇವಿಯು ವೆಂಕಟೇಶನಿಗೆ ಒಂದು ಪದಕವನ್ನು ನವರತ್ನ ಖಚಿತವಾದ ಕಂಠೀಹಾರವನ್ನು ಸಮರ್ಪಿಸಿದಳು. ಹಾಗೆಯೇ ನಿತ್ಯನಿವೇದನಕ್ಕಾಗಿ ಮುಡಿಯೂರು ಗ್ರಾಮವನ್ನು ದಾನಮಾಡಿ ನಿವೇದಿತ ಪ್ರಸಾದದಲ್ಲಿ ಸೇವಾರ್ಥಗಾರರ ಅಂಶದಲ್ಲಿ ಒಂದು ಭಾಗವನ್ನು ತಿರುಪ್ಪಾಣಿಪಿಳ್ಳೆಗೂ ಉಳಿದ ಮೂರು ಭಾಗವನ್ನು ಸತ್ರದ ಉಪಯೋಗಕ್ಕೂ ಕೊಡುವಂತೆ ಏರ್ಪಡಿಸಿದಳು. ತಿರುಮಲೆದೇವಿಯು ಸ್ವಾಮಿಗೆ ಒಂದು ಪದಕವನ್ನೂ ಪಿರಾಳಕ್ಕೊಳತ್ತೂರ್ ಎಂಬ ಗ್ರಾಮವನ್ನೂ ದಾನಮಾಡಿ ಪ್ರಸಾದವಿನಿಯೋಗವನ್ನು ಮೇಲಿನಂತೆಯೇ ನಿಗದಿ ಮಾಡಿದಳು. ರಾಜನೊಡನೆಯೇ ಬಂದಿದ್ದ ಅವನ ಪುರೋಹಿತನಾದ ನಾರಾಯಣದೀಕ್ಷಿತನ ಮಗನಾದ ಯಜ್ಞ ನಾರಾಯಣದೀಕ್ಷಿತನು ನಾಲ್ಕುದಿನಗಳ ಮೇಲೆ ನಾಲ್ಕು ನಿರ್ದೇಶಿತ ಸೇವೆಗಳಿಗೆ ೧೦,೦೦೦ ಚಕ್ರ (ಸುವರ್ಣ ನಾಣ್ಯ) ಗಳನ್ನು ದಾನಮಾಡಿದನು.

ಮೇಲಿನ ಕನಕಾಭಿಷೇಕದ ಸಂದರ್ಭದಲ್ಲಿ ದೇವರಿಗೆ ೪೮೩ ಮುತ್ತುಗಳು ೧೫೯ ಮಾಣಿಕ್ಯಗಳೂ ೧೨೩ ನೀಲಮಣಿಗಳು ೪೮೦ ಚಿನ್ನದ ಕುಸುರಿ ಸರಗಳೂ, ೧೬೦ ಅಣಕಟ್ಟುಗಳಿಂದ ಕೂಡಿದ ಒಟ್ಟು ೨೫೦ ತೂಕದ ಮೂರು ಎಳೆ ಸರವನ್ನು ದಾನಮಾಡಿದನು. ೩೨೨ ವಜ್ರಗಳನ್ನು ನೂರು ಮಾಣಿಕ್ಯಗಳಿಂದ ಕೂಡಿದ ೨೭೫ ತೂಕದ ಒಂದು ಜೊತೆ ತೋಳು ಬಳೆಗಳನ್ನು ಸಮರ್ಪಿಸಿದನು. ದೇವರಿಗೆ ಪ್ರತಿನಿತ್ಯವೂ ಹತ್ತು ತಿರುಪ್ಪಾನಕ ತಳಿಗೆಗಳೂ ಎರಡು ತಿರುಕ್ಕಾವಡೈ ಮತ್ತು ಎರಡು ಅಪ್ಪಪಡಿಗಳನ್ನು ಒಪ್ಪಿಸದೇಕೆಂದು ನಿಗದಿಮಾಡಿದನು.

ಐದನೆಯ ಬಾರಿ ಕೃಷ್ಣದೇವರಾಯನು ತಿರುಮಲೆಗೆ ಭೇಟಿಕೊಟ್ಟದ್ದು ೧೫೧೭ ನೆಯ ಜನವರಿ ೨ ರಂದು. ಆ ವೇಳೆಗೆ ಕೃಷ್ಣದೇವರಾಯನು ಗಜಪತಿರಾಯನ ಮೇಲೆ ತನ್ನ ವಿಜಯವನ್ನು ಸಾಧಿಸಿದ್ದನು. ತನ ಪೂರ್ವವಿಜಯ ಯಾತ್ರೆಯನ್ನು ಮುಗಿಸಿ ೧೫೧೫ ನೆಯ ಅಕ್ಟೋಬರ್ ೨೫ ರಂದು ತಿರುವೇಂಗಡನಾಥನಿಗೆ ರಾಜಧಾನಿಯಾದ ವಿಜಯನಗರದಿಂದಲೇ ಒಂದು ಪ್ರಭಾವಳಿಯನ್ನು ಕಳುಹಿಸಿ

## ದಯಾಶತಕದ ಶರ್ಕರ

ಪ್ರಪದ್ಯೇ ತಂ ಗಿರಿಂ ಪ್ರಾಯಃ ಶ್ರೀನಿವಾಸಾನುಕಂಪಯಾ
ಇಕ್ಷುಸಾರ ಸ್ರವಂತ್ಯೇವ ಯನ್ಮೂರ್ತ್ಯಾ ಶರ್ಕರಾಯಿತಮ್

ಕಬ್ಬಿನರಸದ ನದಿಯಂತಹ ಶ್ರೀನಿವಾಸನ ಯಾವ ದಯೆಯೇ ಸಕ್ಕರೆಯಾದ (ಕಲ್ಲುಗಳಾಗಿರುವ) ವೆಂಕಟಾದ್ರಿಯಾಗಿದೆಯೋ ಅಂತಹ ಬೆಟ್ಟವನ್ನು ವಂದಿಸುತ್ತೇನೆ.

ಅಹಮಸ್ಮ್ಯಪರಾಧ ಚಕ್ರವರ್ತೀ ಕರುಣೇ ತ್ವಂ ಚ ಗುಣೇಷು ಸಾರ್ವಭೌಮಿ
ವಿದುಷೀಸ್ಥಿತಿಮೀದೃಶೀಂ ಸ್ವಯಂ ಮಾಂ ವೃಷಶೈಲೇಶ್ವರ ಪಾದಸಾತ್ಕುರು ತ್ವಂ

ನಾನು ಅಪರಾಧಗಳ ಚಕ್ರವರ್ತಿ. ಎಲೈ ಕರುಣೆಯೇ! ನೀನು ಎಲ್ಲ ಗುಣಗಳ ಸಾರ್ವಭೌಮಳಾಗಿರುವೆ. ನಮ್ಮಿಬ್ಬರ ಪರಿಸ್ಥಿತಿ ಇದು. ಇದನ್ನು ತಿಳಿದ ನೀನೇ ನನ್ನನ್ನು ವೆಂಕಟೇಶ್ವರಸ್ವಾಮಿಯ ಪಾದಸೇವೆಗೆ ತಕ್ಕವನನ್ನಾಗಿಸು.

--ವೇದಾಂತದೇಶಿಕರ ದಯಾಶತಕ.

ದ್ದನು. ಈ ಪ್ರಭಾವಳಿಯಲ್ಲಿ ೮೧ ಮಾಣಿಕ್ಯಗಳೂ ೧೦೬೯೪ ಕೆಂಪುಗಳೂ ೭೫೪ ವಜ್ರಗಳೂ ೫೩೦ ನೀಲಮಣಿಗಳೂ ೪೦ ವೈಢೂರ್ಯಗಳೂ ೪೫ ಗೋಮೇಧಿಕಗಳೂ ೭೫ ಪುಷ್ಯರಾಗಗಳೂ ೯೨-ಹಳಿಯ ವಜ್ರಗಳೂ, ೩೯೩೩ ಮುತ್ತುಗಳೂ, ನಾಲ್ಕು ಗಶಣೆ ನೀಲಗಳೂ, ಆರು ಹರಳುಗಳೂ, ೩೦ ಶಂಖಗಳೂ ಇದ್ದವೆಂದು ವರ್ಣಿತವಾಗಿದೆ. ಪ್ರಭಾವಳಿಯು ಒಟ್ಟು ೩೧೧೨೪ ತೂಕ ಉಳ್ಳದ್ದು.

ಐದನೆಯ (೨-೧-೧೫೧೭) ಸಲ ಕೃಷ್ಣದೇವರಾಯನು ತಿರುಮಲೆಗೆ ಬಂದಾಗ ದೇವರಿಗೆ ಕಂಠಮಾಲೆ ಮತ್ತು ಪದಕಗಳನ್ನೂ ಸಮರ್ಪಿಸಿದುದಲ್ಲದೆ ಗರ್ಭಗುಡಿಯ ಮೇಲಿರುವ ವಿಮಾನಕ್ಕೆ ಬಂಗಾರದ ಮೆರಗು ಹಾಕುವುದಕ್ಕೆ ೩೦೦೦೦ ಗಟ್ಟಿ ವರಹಗಳನ್ನು ಸಲ್ಲಿಸಿ ತಿರುವೇಂಗಡನಾಥನಿಗೆ ಪ್ರತಿಶುಕ್ರವಾರವೂ ನಡೆಯುವ ಪುಳಿಕಾಪು ನೇತಿಗೆ (ತಿರುಮಂಜನ) ಸುತ್ತ ಮುತ್ತಲಿನ ಹಳ್ಳಿಗಳ ಸುಂಕವನ್ನು ದೇವಸ್ಥಾನತ್ತಾರರು ಪಡೆಯಬಹುದೆಂದು ನಿಷ್ಕರ್ಷಿಸಿದನು. ಈ ಸಮಯದಲ್ಲಿ ದೇವಸ್ಥಾನದ ಹೊರಬಾಗಿಲಿನ ಪಕ್ಕದಲ್ಲಿ ತನ್ನ ಮತ್ತು ತನ್ನ ರಾಣಿಯರ ತಾಮ್ರವಿಗ್ರಹವನ್ನು ಸ್ಥಾಪಿಸಿದ ವಿವರವು 'ರಾಯವಾಚಕಮು' ಎಂಬ ತೆಲುಗು ಗ್ರಂಥದಿಂದ ತಿಳಿದುಬರುತ್ತದೆ. ಈ ವಿಗ್ರಹಗಳಲ್ಲಿ ಮಧ್ಯೆ ಇರುವುದು ಕೃಷ್ಣದೇವರಾಯನದು. ಬಲಗಡೆ ಚಿನ್ನಾಜಿ ದೇವಿಯರು, ಎಡಗಡೆಯದು ತಿರುಮಲೆ ದೇವಿಯರು ಎಂದು ಕನ್ನಡದಲ್ಲಿ ಲಿಖಿತವಾಗಿದೆ. ಆತನು ಕಲಶಗಳಿಗೆ ಸುವರ್ಣಲೇಪನ ಮಾಡಿದ ವಿಷಯವು ತೆಲುಗು ಮತ್ತು ತಮಿಳು ಶಾಸನಗಳಲ್ಲಿ ನಮೂದಾಗಿದೆ. ಕೃಷ್ಣದೇವರಾಯನು ಕಲಶಕ್ಕೆ ಚಿನ್ನದ ಮೆರುಗು ಹಾಕಿಸಿದುದು ನಾಲ್ಕನೆಯಸಲ. ಇದಕ್ಕೆ ಹಿಂದೆ ಜಟಾವರ್ಮನ್ ಸುಂದರಪಾಂಡ್ಯ, ಸಾಳುವ ಮಂಗಿದೇವ ಮಹಾರಾಜ ಮತ್ತು ಅಮಾತ್ಯಶೇಖರ ಮಲ್ಲಣ ಇವರುಗಳಿಂದ ಈ ಕಾರ್ಯ ಬೇರೆ ಬೇರೆ ಕಾಲಗಳಲ್ಲಿ ನಡೆದಿತ್ತು. ಮುಂದೆ ವೆಂಕಟಪತಿ ರಾಯನಕಾಲದಲ್ಲಿ ಕಂಚಿಯ ಕೋಟಿಕನ್ಯಕಾದಾನಂ ತಾತಾಚಾರ್ಯರಿಂದಲೂ ಪುನಃಕ್ರಿ.ಶ. ೧೯೦೯ ರಲ್ಲಿ ದೇವಾಲಯಾಧಿಕಾರಿ ರಾಮಲಕ್ಷ್ಮಣದಾಸಜಿ ಮಹಂತರಿಂದಲೂ ಸ್ವರ್ಣಲೇಪನವಾಗಿದೆ.

೧೫೧೮ ರ ಕಮಲಾಪುರದ ಶಾಸನದಿಂದ ಕೃಷ್ಣದೇವರಾಯನು ಕಲಶದ ಸುವರ್ಣಲೇಪನಕಾಲದಲ್ಲಿ ಹಾಜರಾಗಿದ್ದುದು ವ್ಯಕ್ತವಾಗಿದೆ. ತನಗೆ ಹೊಸದಾಗಿ ಜನಿಸಿದ ಮಗುವಿನ (ತಿರುಮಲರಾಯ ಮಹಾರಾಯ) ಶ್ರೇಯೋಭಿವೃದ್ಧಿವಾಗಿ ಕೃಷ್ಣದೇವರಾಯನು ವೆಂಕಟೇಶನಿಗೆ ಕೆಲವು ಗ್ರಾಮಗಳನ್ನು ದಾನಮಾಡಿದುದು ಮದ್ರಾಸ್ ಶಾಸನದ ಇಲಾಖೆಯ ೧೫೨೨ನೆಯ ವರ್ಷದ ವರದಿಯ ಒಂದು ಶಾಸನದಿಂದ ತಿಳಿದು ಬರುತ್ತದೆ. (ಈ ಮಗುವು ೬ ವರ್ಷಕ್ಕೆ ತೀರಿಕೊಂಡಿತು.)

ಕೃಷ್ಣದೇವರಾಯನು ವಿಕ್ರಮಸಂವತ್ಸರದ ಮಾಘ ಶುದ್ಧ ಏಕಾದಶಿ (೭-೨-೧೫೨೧) ರಂದು ಏಳನೆಯ ಸಲ - ಕೊನೆಯಸಲ - ತಿರುವೇಂಗಡನ ಸಂದರ್ಶನಕ್ಕೆ ಬಂದಿದ್ದನು. ಆಗ ತಾನು ದೇವರಿಗೆ ನವರತ್ನ ಖಚಿತವಾದ ಪೀತಾಂಬರ ಮತ್ತು ಪದಕಗಳನ್ನು ಅವನ ಮಹಾರಾಣಿ ತಿರುಮಲದೇವಿಯು ಒಂದು ನವರತ್ನ ಖಚಿತ ಪದಕ ಮತ್ತು ೧೦,೦೦೦ ವರಹಗಳನ್ನುಸಮರ್ಪಿಸಿದರು. ಮುಂದಿನ ಮತ್ತೊಂದು ಶಾಸನದಲ್ಲಿ ಈ ವಿಷಯವು ಸೂಚಿತವಾಗಿದೆ. ಆದರೆ ಅವುಗಳಲ್ಲಿ ಅವನ ವೈಯಕ್ತಿಕ ದಿಗ್ವಿಜಯಗಳಾವುದರ ಉಲ್ಲೇಖವೂ ಇಲ್ಲ.

ಅವನ ಕೊನೆಯ ಶಾಸನ ಕ್ರಿ.ಶ. ೧೫೨೪ನೆಯ ವರ್ಷದ್ದು. ಕೃಷ್ಣದೇವರಾಯನು ತಿರುಪತಿ ಮತ್ತು ತಿರುಮಲೆಗಳಲ್ಲಿ ಒಂದು ಮನೆ ಮತ್ತು ಒಂದು ನಿವೇಶನವನ್ನು ಸ್ಥಾನವಾಸಿಗಳಾದ ವ್ಯಾಸತೀರ್ಥ ಶ್ರೀಪಾದ ಒಡೆಯರ್‌ಗೆ ಸಮರ್ಪಣೆಮಾಡಿರುವ ವಿಷಯವು ಇದರಲ್ಲಿ ಉಕ್ತವಾಗಿದೆ. ಈ ಶಾಸನದಲ್ಲಿ ವ್ಯಾಸತೀರ್ಥರು 'ಬ್ರಹ್ಮಣ್ಯತೀರ್ಥರ ಕರಸಂಜಾತರೆಂದೂ ಪರಮಹಂಸ ಪರಿವ್ರಾಜಕರೆಂದೂ ಸಂಬೋಧಿತರಾಗಿದ್ದಾರೆ'. ಸಕಲ ವಿದ್ವಜ್ಜನ ಮನಃ ಪದ್ಮವನ ಸೌಪತ್ತಿಕಾ, 'ಪದವಾಕ್ಯ ಪ್ರಮಾಣಜ್ಞ', 'ದುರ್ವಾದಿಗರ್ವ ಸರ್ವಸ್ವಾಪಹರ', 'ಶ್ರೀ ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ' ಎಂದೂ ಸಂಬೋಧಿತರಾಗಿದ್ದಾರೆ. ಇವರಿಗೆ ದಾನ ಮಾಡಿರುವ ನಿವೇಶನಗಳಲ್ಲಿ ಒಂದು ತಿರುಪತಿಯಲ್ಲಿ ಗೋವಿಂದರಾಜ ದೇವಾಲಯದ ಉತ್ತರದ ಭಾಗದಲ್ಲಿಯೂ ಮತ್ತೊಂದು ತಿರುಮಲೆಯಲ್ಲಿ ಸ್ವಾಮಿ ಪುಷ್ಕರಿಣಿಯ ಉತ್ತರದ ಬೀದಿಯಲ್ಲಿಯೂ ಇದ್ದುವು. ಮನೆಯು ತಿರುಮಲೆಯಲ್ಲಿ ಪಾಪನಾಶಿನಿಗೆ ಹೋಗುವ ರಸ್ತೆಗೆ ಉತ್ತರದಲ್ಲಿತ್ತು.

ಇದೇ ಶಾಸನದಲ್ಲಿ ವ್ಯಾಸತೀರ್ಥರಿಗೆ ಪುರಟ್ಟಾಶಿ ತಿರುನಾಳಿನ ಪೂರಾಯಂ ಸೇವಾರ್ಥದಲ್ಲಿ ಒಂದು ಭಾಗವನ್ನು ಕೊಡತಕ್ಕದ್ದೆಂದೂ ನಿರ್ದೇಶವಾಗಿದೆ. ಅಲ್ಲಿಗೆ ಕಡ್ಯೆಕ್ಕಾಟ್ಟವ್ವಳ್ಳಿ ಗ್ರಾಮದ ಉತ್ಪತ್ತಿಯಲ್ಲಿ ಅರ್ಧ, ತಾಳ್ಳಪಾಕಂ, ವಿರಾಡಂ, ದಾರತ್ತೂರ್, ಮೂಡಿಯೂರು, ಚಕ್ರವಾಡಿ, ಮರ್ಕೈಯೂರು ಈ ಗ್ರಾಮಗಳ ಪೂರ್ಣ ಆದಾಯವೂ ವ್ಯಾಸತೀರ್ಥರಿಗೆ ಕೊಡಲ್ಪಟ್ಟಿದೆ. ವ್ಯಾಸತೀರ್ಥರ ಪ್ರಸಾದದಲ್ಲಿ ಒಂದು ಭಾಗವನ್ನು ಅವರ ಮಠದಲ್ಲಿ ಬ್ರಾಹ್ಮಣ ಸಂತರ್ಪಣೆಗೆ ಉಪಯೋಗಿಸತಕ್ಕದ್ದು. ಈ ಮಠವು ಮೇಲೆ ಸೂಚಿಸಿರುವ ನಿವೇಶನದಲ್ಲಿ ಕಟ್ಟಿ ಬೇಕೆಂದಿರುವ ಮಠವಿರಬಹುದು. ಈ ನಿವೇಶನದ ಒಂದು ಭಾಗವು ದೇವಸ್ಥಾನದ ಸೌಕರನಾಗಿದ್ದ ನಂಬಿಸಿಂಗಪ್ಪಯ್ಯನಿಗೆ ಸೇರಿದ್ದಿರಬೇಕು. ಅವನು ದೇವಸ್ಥಾನಕ್ಕೆ ಸೇರಿದ ಕೆಲವು ವಸ್ತುಗಳನ್ನು ದುರುಪಯೋಗಪಡಿಸಿದುದರಿಂದ ಈ ಭಾಗವನ್ನು ಅದರ ಪರಿಹಾರಕ್ಕಾಗಿ ಮುಟ್ಟುಗೋಲು ಹಾಕಿಕೊಂಡಿದ್ದಿರಬೇಕು. ಮೇಲೆ ಹೇಳಿದ ಗ್ರಾಮಗಳಲ್ಲಿ ದಾರತ್ತೂರು ಚಕ್ರವಾಡಿ ಮತ್ತು ಮರ್ಕೈಯೂರು ಗ್ರಾಮಗಳು ಕೃಷ್ಣದೇವರಾಯನಿಂದಲೂ, ಉಳಿದುವು ಚಿನ್ನಾಜಿ ದೇವಿಯಿಂದಲೂ, ಪ್ರಸಾದವು ತಿರುಮಲದೇವಿಯಿಂದಲೂ ದಾನ ಮಾಡಲ್ಪಟ್ಟಿದ್ದಾಗಿರಬೇಕು.

ಕೃಷ್ಣದೇವರಾಯನ ಸೇವಾಮನೋಭಾವವನ್ನು ಅವನ ಸಾಮಂತರೂ ಅಧಿಕಾರಿಗಳನೇಕರೂ ಸಂಪೂರ್ಣವಾಗಿ ಅನುಸರಿಸಿ ತಮಗಾಗಿಯೂ ತಮ್ಮ ಒಡೆಯರ ಶ್ರೇಯಸ್ಸಿಗಾಗಿಯೂ ವೆಂಕಟೇಶನಿಗೆ ಅನೇಕ ದತ್ತಿಗಳನ್ನು ಬಿಟ್ಟಿದ್ದಾರೆ. ಅವರಲ್ಲಿ ಪ್ರಧಾನಿ ತಿಮ್ಮರಸ, ಸಾಳುವ ಗೋವಿಂದರಾಜ ತ್ರಿಯಂಬಕದೇವ, ರಾಯಸಂ ಕೊಂಡರಸಯ್ಯ, ಕರಣಿಕ ಬಸವರಸ, ಕರಣಿಕ ಆಟ್ಟವಣಿ ಬಸವರಸ, ಅವಸರದ ನರಸಯ್ಯ ಮತ್ತು ಅವನ ಸಹೋದರ ತಿಮ್ಮಯ್ಯ, ಉಡಿಯಮ್ ಎಲ್ಲಪ್ಪನಾಯಕ, ಅಡಿಯಪ್ಪ, ಭಯ್ಯಪ್ಪನಾಯಕ ಮೊದಲಾದವರನ್ನು ಹೆಸರಿಸಬಹುದು. ಇವರ ಸೇವೆಯೆಲ್ಲ ದೇವಸ್ಥಾನದ ಶಾಸನಗಳಲ್ಲಿ ಲಿಖಿತವಾಗಿವೆ, ಇವರ ಬಹುಮುಖವಾದ ಸೇವೆಗಳಿಂದ ತಿರುಪತಿ ತಿರುಮಲೆ ದೇವಸ್ಥಾನಗಳ ವಿವಿಧ ಉತ್ಸವಾದಿ ಸೇವೆಗಳು ಬಹು ಶ್ರೀಮಂತವಾಗಿ ನಡೆಯಲು ಸಹಾಯಕವಾದುವು. ಆದುದರಿಂದ ತಿರುಮಲೆ ದೇವಾಲಯದ ಅಭಿವೃದ್ಧಿಯಲ್ಲಿ ಕೃಷ್ಣದೇವರಾಯನ ಪಾತ್ರವು ಬಹುಗಣ್ಯವಾದುದಾಗಿದೆ.



ಡಾ|| ಎನ್. ಅನಂತರಂಗಾಚಾರ್ಯರು ಕನ್ನಡದ ಉದ್ದಾಮ ವಿದ್ವಾಂಸರು, ಸಾಹಿತ್ಯಭಾರತಿ, ಚಂಪೂಕಾವ್ಯಗಳ ಪದ್ಯಾನುಕ್ರಮಣಿ ಮೊದಲಾದ ವಿದ್ವತ್ಕೃತಿಗಳನ್ನು ನೀಡಿರುವುದೇ ಅಲ್ಲದೆ ಕಾವ್ಯಸಾರ, ಸೂಕ್ತಿ ಸುಧಾರ್ಣವ ಮೊದಲಾದವನ್ನು ಸಂಪಾದಿಸಿದ ಹಿರಿಮೆಯವರದು. ಅವರು ಈ ಹಿಂದೆ ಸಪ್ತಗಿರಿಯಲ್ಲಿ ಬರೆದ ಒಂದು ಲೇಖನವಿದು.

ಸಂದರ್ಭೋಚಿತವೆಂದು ಪುನರ್ಮುದ್ರಿಸಲಾಗಿದೆ.

# ಅಚ್ಯುತರಾಯ-ತಿರುಮಲ

ಆಂಗ್ಲಮೂಲ - ಶ್ರೀ ವೆಂಕಟೇಶ್ವರ,

---ದಿ|| ಸಾಧುಸುಬ್ರಹ್ಮಣ್ಯಶಾಸ್ತ್ರಿ.

ಅಚ್ಯುತರಾಯ ಕೃಷ್ಣದೇವರಾಯನ ಮಲತಮ್ಮ ಕೃಷ್ಣದೇವರಾಯನ ನಂತರ ವಿಜಯನಗರ ಸಾಮ್ರಾಟನಾದ. ಅವರ ತಂದೆ ತುಳುವ ನರಸನಾಯಕನಿಗೆ ನಾಲ್ಕು ಮಂದಿ ಗಂಡುಮಕ್ಕಳು. ತಿಪ್ಪಾಜಿ ಅಥವಾ ತಿಮ್ಮಾಂಬಳಿಂದ ವೀರನರಸಿಂಹನೂ, ನಾಗಲಾಂಬೆಯಿಂದ ಕೃಷ್ಣದೇವರಾಯನೂ, ಓಬಾಂಬಳಿಂದ (ಓಬಚೆನ್ನಮ್ಮ) ಅಚ್ಯುತರಾಯ, ರಂಗರಾಯರೂ ಜನಿಸಿದರು. ರಂಗರಾಯ ಬೇಗನೆ ಮರಣವನ್ನಪ್ಪಿದ. ಅವನ ಮಗ ಸದಾಶಿವರಾಯ ಅಚ್ಯುತರಾಯನ ನಂತರ ವಿಜಯನಗರದ ದೊರೆಯಾದ.

ನ್ಯೂನಿಜ್ ಹೇಳುವಂತೆ ಕೃಷ್ಣರಾಯ ದೊರೆಯಾಗಿ ಇಡೀ ರಾಜ್ಯದಲ್ಲಿ ಅವನ ಮಾತಿಗೆ ಬೆಲೆ ಬಂದೊಡನೆಯೇ ತನ್ನ ಅಣ್ಣನ (ವೀರ ನರಸಿಂಹ ರಾಯನ) (ಕೃಷ್ಣದೇವರಾಯನಿಗೂ ಅವನಿಗಿಂತ ಮೊದಲು ಅವರಣ್ಣ ವೀರನರಸಿಂಹರಾಯನಿಗೂ ಮಂತ್ರಿಯಾಗಿದ್ದವ ಸಾಳುವ ತಿಮ್ಮ) ಮಗನನ್ನೂ ತನ್ನ ಮೂವರು ಸಹೋದರರನ್ನೂ ಚಂದ್ರಗಿರಿ ಕೋಟೆಗೆ ಕಳುಹಿಸಿದ. ಕೃಷ್ಣದೇವರಾಯನ ಮರಣದವರೆಗೆ ಇವರು ಚಂದ್ರಗಿರಿ ಕೋಟೆಯಲ್ಲಿಯೇ ಇದ್ದರು. (ಮರೆತುಹೋದ ಸಾಮ್ರಾಜ್ಯ - ಸಿವೆಲ್ - ಪುಟ - ೩೧೫-೩೧೬) (ನ್ಯೂನಿಜ್ ತುಳವ ನರಸನಾಯಕನಿಗೆ ಐದು ಮಕ್ಕಳಿದ್ದರೆಂದು ಹೇಳಿದ್ದರೂ ನಾಲ್ಕುಮಂದಿ ಮಾತ್ರವೇ ತಿಳಿದುಬಂದಿದ್ದು ಅವನು ಹೇಳುವ ಕಡೆಯ ಮೂರು ಹೆಸರುಗಳು ಅಪರಿಚಿತವಾಗಿವೆ......... ಕೃಷ್ಣರಾಯ ಸಾಯುವ ಸ್ವಲ್ಪ ಮೊದಲು ಚಂದ್ರಗಿರಿಯಲ್ಲಿದ್ದ ತನ್ನ ತಮ್ಮ ಅಚ್ಯುತರಾಯನನ್ನೇ ತನ್ನ ನಂತರ ಪ್ರಭುವನ್ನಾಗಿ ಮಾಡಬೇಕೆಂದು ಅಪೇಕ್ಷಿಪಟ್ಟ..........)

ಹೀಗಾಗಿ ಕೃಷ್ಣದೇವರಾಯನ ಮರಣಕ್ಕೆ ಸ್ವಲ್ಪ ಮೊದಲು ಅಚ್ಯುತರಾಯನಿಗೆ ಚಂದ್ರಗಿರಿಯ ಕೋಟೆಯಿಂದ ಬಿಡುಗಡೆ ದೊರೆತಿರಬೇಕು. ಆತ ಕೂಡಲೇ ತನ್ನ ಆಳ್ವಿಕೆಯನ್ನಾರಂಭಿಸಿದ. ಆತನಿಗೆ ಮೂರು ಬಾರಿ ಪಟ್ಟಾಭಿಷೇಕವಾದಂತೆ ತೋರುತ್ತದೆ. ಬಿಡುಗಡೆಯಾದನಂತರ ಮೊದಲಬಾರಿಗೆ ತಿರುಮಲೆಯಲ್ಲಿ 'ವೆಂಕಟೇಶ್ವರನ ಕೈಯ ಶಂಖದಿಂದ ಸುರಿದ ಜಲದಿಂದ ಸ್ನಾತನಾದ.' ಎರಡನೆಯ ಬಾರಿ ೧೫೨೯ ಕ್ರಿ.ಶ. ಅಕ್ಟೋಬರ್ ೨೧ ರಂದು ಶ್ರೀಕಾಳಹಸ್ತಿಯ ಶ್ರೀಕಾಳಹಸ್ತೀಶ್ವರನ ಸನ್ನಿಧಿಯಲ್ಲಿಯೂ, ಮೂರನೆಯ ಬಾರಿ ಕ್ರಿ.ಶ. ೧೫೨೯ ರಲ್ಲಿ ನವಂಬರ್ ೨೦ ರಂದು ವಿಜಯನಗರ ರಾಜಧಾನಿಯಲ್ಲಿ ಸಕಲ ಸಾಂಪ್ರದಾಯದಂತೆ ಶಾಸ್ತ್ರೋಕ್ತವಾಗಿ ವೈಭವದಿಂದ ಪಟ್ಟಾಭಿಷೇಕವಾಯಿತು.

ತಿರುಪತಿಗೆ ಆತನ ಮೊದಲಸೇವೆ ಸಂದದ್ದು ತಿರುಪತಿಯಿಂದ ಒಂದು ಮೈಲಿ ದೂರದ ಕಪಿಲತೀರ್ಥ ಜಲಾಶಯದ ಜೀರ್ಣೋದ್ಧಾರದಲ್ಲಿ. ಕೊಳದ ನೀರಿನಲ್ಲಿಳಿಯಲು, ಮೇಲೇರಿ ಬರಲು ನಾಲ್ಕೂ ಕಡೆಯಲ್ಲಿ ಕಲ್ಲಿನ ಮೆಟ್ಟಿಲುಗಳನ್ನು ಹಾಕಿಸಿ ಕೊಳದ ಪೂರ್ವ ಪಶ್ಚಿಮದಲ್ಲಿ ಸಂಧ್ಯಾವಂದನ ಮಂಟಪಗಳನ್ನು ನಿರ್ಮಿಸಿ, ಮಂಟಪದ ನಾಲ್ಕೂ ಕಡೆಗಳಲ್ಲಿ ಸುದರ್ಶನ ಚಕ್ರಗಳನ್ನು - ಕಲ್ಲಿನ ಚಕ್ರಗಳ ಮುದ್ರೆಗಳನ್ನು ಕೆತ್ತಿಸಿ ತಿರುವೆಂಗಡನಾಥ ಈ ದಿವ್ಯ ಪುಷ್ಕರಿಣಿಗೆ ಚಕ್ರ ತೀರ್ಥವೆಂಬ ಹೆಸರಿಟ್ಟ. (ಸಂ. ೪-ಶಾ-೮೯,೧೦)

ಆತ ತಿರುಮಲೆಯ ವೆಂಕಟೇಶ್ವರಸ್ವಾಮಿಯನ್ನು ನೋಡಲು ಮೂರು ಬಾರಿ ಆಗಮಿಸಿದ್ದ. ಮೊದಲ



ಅಚ್ಯುತರಾಯ ಹಾಗೂ ವರದಾಜೀ ಅಮ್ಮ

ಬಾರಿ ಬಂದಾಗ ಕ್ರಿ.ಶ. ೧೫೩೩ ಜನವರಿ೩೧ ಅತಿ ವಿಶೇಷವಾದ ಕಪಿಲಪಶು,(ಬಂಗಾರದ ಗೋವು) ಸ್ವರ್ಣವರ್ಷ (ಬಂಗಾರದ ನಾಣ್ಯಗಳ ಮಳೆ) ಪೂಜೆಗಳನ್ನು ಮಾಡಿದ. ಅನರ್ಘ್ಯ ವಜ್ರಗಳಿಂದ ಕೂಡಿದ ನಿಲುವಂಗಿಯೊಡನೆ ಅನೇಕ ಅಮೂಲ್ಯ ಆಭರಣಗಳನ್ನು ದೇವರಿಗೆ ಕಾಣಿಕೆ ನೀಡಿದ. ಒಂದು ವಜ್ರ ಖಚಿತ ಕಿರೀಟವನ್ನೂ ನಾಲ್ಕು ಭುಜಕೀರ್ತಿಗಳನ್ನೂ ಅರ್ಪಿಸಿದ. ಒಂದು ಕಂಠಹಾರವನ್ನೂ, ಶಿರೋಭೂಷಣವನ್ನೂ, ಉರ, ಶಿರ, ನೇತ್ರಾಭರಣಗಳನ್ನೂ ನೀಡಿ ಅರ್ಚಕರು ಸಹಸ್ರನಾಮ ಮಂತ್ರಗಳನ್ನು ಘೋಷಿಸುತ್ತಿದ್ದಂತೆ, ಅರ್ಚನೆಯನ್ನೂ ತಾನೇ ಸ್ವತಃ ಮಾಡಿದ. ಆತನ ಮಹಾರಾಣಿ ವರದಾಜಿ ಅಮ್ಮನೂ, ಮಗ ಕುಮಾರ ವೆಂಕಟಾದ್ರಿಯೂ ಈ ಪೂಜೆಯನ್ನು ನೋಡಿದರು. (ಅದೇ - ಸಂಖ್ಯೆ - ೧೬, ೧೭.)

ಆತನ ಎರಡನೇ ಯಾತ್ರೆ ಕ್ರಿ.ಶ. ೧೫೩೫ ರ ಡಿಸೆಂಬರ್ ೨೬ ರಂದು ಆಯಿತು. ಈ ಬಾರಿ ಅಲರ್‌ಮೇಲ್ ಮಂಗೈ (ಪದ್ಮಾವತೀ) ಪೂಜೆಯನ್ನು ಮಹಾಲಕ್ಷ್ಮಿ ಮಹೋತ್ಸವವೆಂಬ ಐದು ದಿನಗಳ ಉತ್ಸವವನ್ನು ವೆಂಕಟೇಶ್ವರಸ್ವಾಮಿಗೆ ಏರ್ಪಡಿಸಿದ. ಇದರ ವೆಚ್ಚಗಳಿಗಾಗಿ ಕೊಂಡವೀಡು ಸೀಮೆಯ ಗ್ರಾಮಗಳಿಂದ ೩೦೦ ರೇಖೈಪೊನ್ ಆದಾಯವನ್ನು ಉತ್ತರಾಯವಾಗಿ ನಿಗದಿ ಮಾಡಿ ನೀಡಿದ. (ಸಂಖ್ಯೆ ೫೪) ಶಾಸನದಲ್ಲಿ ಯಾವ ತಿಂಗಳು ಯಾವ ದಿನಗಳಲ್ಲಿ ಈ ಉತ್ಸವವನ್ನು ನಡೆಸಬೇಕೆಂಬುದು ಪ್ರಮಾದವಶಾತ್ ಬಿಟ್ಟು ಹೋಗಿದೆ. ಇದರ ಉಪಾಂಗವೆನ್ನಬಹುದಾದ (ಸಂ - ೫೫ ) ನಂತರದ ಒಂದು ಶಾಸನದಲ್ಲಿ ಉತ್ಸವ ದಿನಗಳನ್ನು ಐದು ದಿನಗಳಿಂದ ಏಳು ದಿನಗಳಿಗೆ ಅಂಕುರಾರ್ಪಣೆಯ ಉತ್ತರತ್ತಾದಿ (ಉತ್ತರಾಷಾಢ) ಯಿಂದ, ಉತ್ಸವ ಸಮಾಪ್ತಿಯ ರೋಹಿಣೀ ನಕ್ಷತ್ರದವರೆಗೆ (ಏಳುದಿನಗಳಾಗದು - ಆರೇ ದಿನಗಳಾಗುತ್ತವೆ.) ವಿಸ್ತರಿಸಿದಂತೆ ತಿಳಿಸಿದ್ದರೂ, ತಿಂಗಳ ಹೆಸರು ಇಲ್ಲೂ ಬಿಟ್ಟು ಹೋಗಿದೆ. ಆತ ಕಟ್ಟಿಸಿದ ಏಳು ಮಂಟಪಗಳಲ್ಲಿ ಮಲೆಯಪ್ಪಸ್ವಾಮಿಗೆ ನಲವತ್ತು ಪ್ರಸಾದಗಳನ್ನೂ, ಐದು ಬಗೆಯ ಪಣ್ಯಾರಗಳನ್ನೂ ನಿವೇದನೆ ಮಾಡಬೇಕೆಂದು ಹೇಳಲಾಗಿದೆ. ಅವುಗಳೆಂದರೆ ಅಚ್ಯುತರಾಯಸ್ವಾಮಿ ಮಂಟಪ, ವರದರಾಜಸ್ವಾಮಿಯಮ್ಮನ್ ಮಂಟಪ, ಅಚ್ಯುತರಾಯ ಅಂಕಣ ಮಂಟಪ, ವರದಾಜಿ ಅಮ್ಮನ್ ಅಂಕಣ ಮಂಟಪ, ಕುಮಾರ ಚಿಕ್ಕ ವೆಂಕಟಾದ್ರಿ ಒಡೆಯರ್ ಅಂಕಣ ಮಂಟಪ, ನರಸಿಂಹನಾಯಕರ್ ಅಂಕಣ ಮಂಟಪ, ಹಾಗೂ ಓಬಲಾಚ್ಚೆ ಅಮ್ಮನ್ ಅಂಕಣ ಮಂಟಪ. ಕಡೆಯ ಎರಡು ಹೆಸರುಗಳು ಆತನ ತಂದೆ ನರಸನಾಯಕ ಮತ್ತು ತಾಯಿ ಓಬಲಾಚ್ಚೆಯರನ್ನು ಸೂಚಿಸುತ್ತವೆ.

ಕ್ರಿ.ಶ. ೧೫೩೫ ರ ಡಿಸೆಂಬರ್ ೨೬ ರಂದು ಆತ ಮಹಾಲಕ್ಷ್ಮಿ ಮಹೋತ್ಸವವನ್ನು ಆರಂಭಿಸಿದಾಗಲೇ, ಶ್ರೀರಾಮನ ಹುಟ್ಟಿದ ನಕ್ಷತ್ರವಾದ ಪುನರ್ವಸುವಿನಲ್ಲಿ ಆಚರಿಸಲು (ವರ್ಷದಲ್ಲಿ ಹದಿಮೂರು ದಿನ) ವೆಂಕಟೇಶ್ವರಸ್ವಾಮಿ ಆಲಯದಲ್ಲಿರುವ ರಘುನಾಥ, ಸೀತೆ, ಹಾಗೂ ಇಳಯ ಪೆರುಮಾಳ (ಲಕ್ಷ್ಮಣ) ರಿಗಾಗಿ ಒಂದು ಉತ್ಸವವನ್ನೂ ಏರ್ಪಡಿಸಿದ. ಈ ಹದಿಮೂರು ದಿನಗಳಲ್ಲಿ ಅವುಗಳ ಅಭಿಷೇಕ, ಪ್ರಸಾದ, ಪಣ್ಯಾರಗಳಿಗಾಗಿ ವೀಧಿ ಮೆರವಣಿಗೆಗಾಗಿ, ಕೊಂಡವೀಡು ಸೀಮೆಯ ಗ್ರಾಮಗಳ ಆದಾಯದಿಂದಲೇ ಅರವತ್ತು ರೇಖೈ ಪೊನ್‌ಗಳ ಉತ್ತರಾಯವನ್ನೂ ಏರ್ಪಡಿಸಿದ. (ಸಂಖ್ಯೆ - ೫೮) ೫೮ ಎ ನಲ್ಲಿ ಸ್ಥಾನತ್ತಾರರುಗಳ ವತಿಯಿಂದ ಎರಡುಬಗೆಯ ಪಣ್ಯಾರ, ಗೋಡಂಬಿ, ಪಚ್ಚ ಕರ್ಪೂರಗಳು ಸಂದಾಯವಾಗಬೇಕೆಂದೂ ವಿಧಿಸಲಾಗಿದೆ.

ಅಚ್ಯುತರಾಯನ ಎರಡನೇ ಭೇಟಿಯ ಸಮಯದಲ್ಲಿ ಅವನೊಡನೆ ಅವನ ಆಡಳಿತ ಸಹಾಯಕರೂ ಹಲವರು ಬಂದಿರಬೇಕು. ರಾಮಭಟ್ಟರಯ್ಯನ್, ರಾಯಸಂ ರಾಮಚಂದ್ರ ದೀಕ್ಷಿತ, ಮಲೆಯಪ್ಪರಯ್ಯನ್, ಇವರ ಜೊತೆಗೇ ಆತನ ಇಬ್ಬರು ಹಡಪದವರು - ಅಡೆಯಪ್ಪಂ ರುಕ್ಮಿಣಿಯಮ್ಮ ಅಡೆಯಪ್ಪಂ ಪರ್ಮಾದಮ್ಮ - ಎಲ್ಲರೂ ವೆಂಕಟೇಶ್ವರಸ್ವಾಮಿಗೆ ಕಾಣಿಕೆಗಳನ್ನು ನೀಡಿದರು. ರಾಮಭಟ್ಟನು ಒಂದು ಅಗ್ರಹಾರವನ್ನೇ ನಿರ್ಮಿಸಿ ಅಲ್ಲಿ ಶ್ರೀರಾಮನ ವಿಗ್ರಹವನ್ನು ಪ್ರತಿಷ್ಠಾಪಿಸಿದ. (ಸಂಖ್ಯೆ - ೫೧, ೫೯, ೬೦, ೫೭, ೫೬)

ಅಚ್ಯುತರಾಯನ ಮೂರನೇ ಭೇಟಿ ಕ್ರಿ.ಶ. ೧೫೩೭ರ ಜನವರಿ ೧೨ ರಂದು ಆಗಿರಬೇಕೆಂಬುದು ಅಂದು ತಿರುಮಲೆಯಲ್ಲಿ ಅರೆಡಜನ್ ಅಧಿಕಾರಿಗಳು ಉಪಸ್ಥಿತರಿದ್ದರೆಂಬುದರಿಂದ ತಿಳಿಯುತ್ತದೆ. ಇವರೆಲ್ಲ ಮಲೆಯಪ್ಪಸ್ವಾಮಿಗೆ ವರ್ಷಕ್ಕೆ ೩೦೦ ಅಪ್ಪ ಪಡಿಗಳನ್ನು ನಿವೇದಿಸಲು ಪ್ರತಿಯೊಬ್ಬರೂ ೧೫೦೦೦ ನರ್ಪಣಂಗಳನ್ನು ನೀಡಿದರು. ಅವರುಗಳೆಂದರೆ ಅಡೆಯಪ್ಪಂ ವಿಶ್ವನಾಥ ನಾಯಕ. (ಸಂ - ೮೧) ಕೃಷ್ಣಪ್ಪನಾಯಕ (ಸಂ-೮೨) ಬಚ್ಚರಸಯ್ಯ ಅಥವಾ ರಾಮಯಭಾಸ್ಕರ (ಸಂ - ೮೩) ರಾಮಭಟ್ಟರ್ ಅಯ್ಯ (ಸಂ - ೮೪) ಇಮ್ಮಡಿ ಎಲ್ಲಪ್ಪ ಒಡೆಯರ್ (ಸಂ-೮೬) ಸಲಕರಾಜ ಸಿಂಗರಾಜ, (ಅಚ್ಯುತ ರಾಯನ ಮೂವರು ಬಾವಮೈದುನರಲ್ಲಿ ಅತಿಕಿರಿಯ - ಸಂ - ೮೮) ೮೯ ನೇ ಶಾಸನವು ಅಚ್ಯುತರಾಯನ ಆಣತಿಯಂತೆ ೧೨-೧-೧೫೩೭ ರಲ್ಲಿ ದಾನಗಳನ್ನೆಲ್ಲ ಶಾಸನದಲ್ಲಿ ದಾಖಲು ಮಾಡಲಾಯಿತು. ಈ ಶಾಸನದಲ್ಲಿ ಆ ದಿನಗಳಲ್ಲಿ ಪ್ರಚಲಿತವಾಗಿದ್ದ ವರ್ಷದ ಎಂಟು ಬ್ರಹ್ಮೋತ್ಸವಗಳಲ್ಲಿಯೂ ಒಂದು ಅಪ್ಪ ಪಡಿ ನೈವೇದ್ಯಕ್ಕಾಗಿ ಮಲ್ಲಾಪುರ ಗ್ರಾಮವನ್ನು ದಾನಮಾಡಿದವನೂ, ನೈವೇದ್ಯದ ದಾಯಭಾಗ (ನಾಲ್ಕನೇ ಒಂದು ಭಾಗ - ದಾನಿಯಪಾಲು) ಒಬ್ಬಾನೊಬ್ಬ ಅಪ್ಪಯ್ಯನ್‌ಗೆ ನೀಡಬೇಕೆಂದು ಕಟ್ಟಳೆ ಮಾಡಿದವನು ಸಾಳುವ ತಿಮ್ಮರಸನೇ ಆಗಿರಬೇಕು ಮತ್ತು ನೈವೇದ್ಯದ ಪಾಲು ಪಡೆಯುವ ಅಧಿಕಾರಿ ತಿಮ್ಮರಸನ ಸೋದರಳಿಯನೂ, ಅಳಿಯನೂ ಆದ ನಾದಿಂಡ್ಲ ಅಪ್ಪನಾಗಿರಬೇಕೆಂದು ತಿಳಿದುಬರುತ್ತದೆ.

ಈ ಮಧ್ಯೆ ಅಚ್ಯುತರಾಯನ ರಾಣಿ ವರದಾಜಿ ದೇವಿ ಅಮ್ಮನೂ ಕ್ರಿ.ಶ. ೧೫೩೪ ಕ ಏಪ್ರಿಲ್ ೫ ರಂದು ವೆಂಕಟೇಶ್ವರಸ್ವಾಮಿಗೆ ಭಕ್ತಿ ಗೌರವಗಳನ್ನು ಸೂಚಿಸುತ್ತ ಆರು ಗ್ರಾಮಗಳನ್ನು ಉಂಬಳಿ ನೀಡಿದಳು. ದಿನವೂ ಕೃಷ್ಣರಾಯ ಹಾಗೂ ಅಚ್ಯುತರಾಯರ ನಿವೇದನಗಳ ನಂತರ ತನ್ನ ಹೆಸರಿನಲ್ಲಿ ದೇವರಿಗೆ ಇಪ್ಪತ್ತು ಪ್ರಸಾದಗಳ ಹಾಗೂ ಐದು ಬಗೆಯ ಪಣ್ಯಾರಗಳ ನಿವೇದನೆಗಾಗಿ, ವಾರ್ಷಿಕ ೯೨೦ ರೇಖೈ ಪೊನ್ (ಚಿನ್ನದ ನಾಣ್ಯಗಳು - ಪ್ರಾಯಶಃ ವರಹಗಳು) ಆದಾಯದ ಈ ಗ್ರಾಮಗಳು ದತ್ತಿಯಾಗಿದ್ದವು. ಕೆಲ ಕಾಲಾನಂತರ ತಿರುಪತಿಯ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವದಲ್ಲಿ ಸ್ವಾಮಿಯ ಮೆರವಣಿಗೆ ಬಂದಾಗ ತನ್ನ ಹೆಸರಿನ ಮಂಟಪದಲ್ಲಿ ನಿವೇದಿಸಲು ಪ್ರಸಾದ ಪಣ್ಯಾರಗಳಿಗಾಗಿಯೂ ದತ್ತಿ ಹಾಕಿ ಕೊಟ್ಟಳು. ಕಾರ್ತೀಕ ಮಾಸದ ಉತ್ತರಾಷಾಢ ನಕ್ಷತ್ರ ದಿನದಂದು ತಿರುಚಾನೂರಿನ ಅಲರ್‌ಮೇಲ್ ಮಂಗೈ ತಾಯಾರಿಗೆ ಪದ್ಮಸರೋವರದ ತಡಿಯಲ್ಲಿ ಪ್ರಸಾದ ನೈವೇದ್ಯಕ್ಕೆ ದತ್ತಿ ನೀಡಿ, ತಿರುಪತಿಯಲ್ಲಿ ಸುಂದರರಾಜಸ್ವಾಮಿಗೆ, ತಿರುಮಂಗೈ ಆಳ್ವಾರರಿಗೆ, ಶೂಡಿಕೊಡುತ್ತ ನಾಚ್ಚಿಯಾರ್ (ಗೋದಾದೇವಿ) ಗಳಿಗೆ ನಿವೇದನೆಗಳಿಗಾಗಿ ದಾನ ನೀಡಿದಳು. (ಸಂ-೯೭)

ಕಪಿಲತೀರ್ಥದ ಕಪಿಲೇಶ್ವರಸ್ವಾಮಿ ಆಲಯದ ದಕ್ಷಿಣಕ್ಕೆ ಪ್ರಾಚೀನ ಕೊತ್ತೂರು ಗ್ರಾಮದಲ್ಲಿ ಅಚ್ಯುತರಾಯನು ಮೆಟ್ಟಿಲ ಬಾವಿ ಹಾಗೂ ದ್ವಾರಗೋಪುರದಿಂದ ಕೂಡಿದ ಒಂದು ಆಲಯವನ್ನು ನಿರ್ಮಿಸಿದ. ಇದರಲ್ಲಿ ತನ್ನ ಹೆಸರಿನ ಅಚ್ಯುತ ಪೆರುಮಾಳನ್ನು ಪ್ರತಿಷ್ಠಾಪಿಸಿ, ಸ್ಥಳಕ್ಕಾಗಿ ವೆಂಕಟೇಶ್ವರಸ್ವಾಮಿಗೆ ೨೪೦೦ ನರ್ಪಣಗಳ ಪರಿಹಾರವನ್ನಿತ್ತು, ಈ ದೇವಾಲಯದ ಸುತ್ತಣ ಸ್ಥಳದಲ್ಲಿ ೧೨೦ ಮನೆಗಳನ್ನು ನಿರ್ಮಿಸಿದ. ಈ ಮನೆಗಳಲ್ಲಿ ವಾಸಮಾಡಿಕೊಂಡು ಹೊಸ ಆಲಯದಲ್ಲಿ ಕೈಂಕರ್ಯವೆಸಗಲು ಬ್ರಾಹ್ಮಣರಿಗೆ ಇವುಗಳನ್ನು ನೀಡಿದ. ೧೨೦ ಫಲಾ

ಶುಭದಿನಗಳಲ್ಲಿ ನೂರುಮಂದಿಗೆ ತಮ್ಮ ಮನೆಗಳನ್ನು ಭೋಗ್ಯ ಮಾಡುವ, ಅಡವಿಡುವ, ಮಾರುವ, ದಾನ ನೀಡುವ ಅಧಿಕಾರವನ್ನು ನೀಡಿದರೆ ಮಿಕ್ಕ ಇಪ್ಪತ್ತು ಮಂದಿಗೆ ಈ ಅಧಿಕಾರವನ್ನು ನಿರಾಕರಿಸಲಾಯ್ತು. ಈ ಆಲಯದ ನಿರಂತರ ಪೂಜಾದಿಗಳಿಗಾಗಿ ಈಗಣ ಪುತ್ತೂರು, ಮದರಾಸು ರೈಲ್ವೆ ಮಾರ್ಗದ ಬಳಿಯ ಪರಿಟಿ ಪುತ್ತೂರು ಗ್ರಾಮವನ್ನು ಉಂಬಳಿಯಾಗಿಸಿ, ಅದನ್ನು ಇಪ್ಪತ್ತು ಭಾಗಗಳನ್ನಾಗಿ ಮಾಡಿ ಇಪ್ಪತ್ತು ಮಂದಿಗೆ ಅವುಗಳ ಜವಾಬ್ದಾರಿಯನ್ನು ವಹಿಸಿದ. (ಸಂ - ೧೨೩). ಇದರ ಕಾಲ ಕ್ರಿ.ಶ. ೧೫೩೯ರ ಫೆಬ್ರವರಿ ೮. ಆದರೆ ಇದಕ್ಕೂ ಮೊದಲು ಎರಡುವರ್ಷದ ಹಿಂದೆ ೧೫೩೭-ಜನವರಿ-೧೭ ರಂದು ಚಂದ್ರಗಿರಿಯ ಸಾಮಿಸೆಟ್ಟಿ ತನ್ನ ಹೆಸರಿನ ಮಂಟಪದಲ್ಲಿ ಅಚ್ಯುತ ಪೆರುಮಾಳ್ ಹಾಗೂ ಗೋವಿಂದರಾಜಸ್ವಾಮಿ ಉತ್ಸವಗಳ ನೈವೇದ್ಯಕ್ಕಾಗಿ ದತ್ತಿ ನೀಡುವುದನ್ನು ಗಮನಿಸಿದರೆ ೧೫೩೭ ರ ಜನವರಿಗಿಂತ ಮೊದಲೇ ಅಚ್ಯುತ ಪೆರುಮಾಳ್ ವಿಗ್ರಹ ಪ್ರತಿಷ್ಠಾಪನೆಯಾಗಿರಬೇಕೆಂದೂ, ೧೨೩ ನೇ ಸಂಖ್ಯೆಯ ಶಾಸನ ಮೊದಲೇ ನಡೆದ ಒಂದು ಏರ್ಪಾಡಿನ, ನಂತರಕಾಲದ ದಾಖಲೆ ಮಾತ್ರವೆಂದೂ ಖಚಿತವಾಗುತ್ತದೆ. ೧೫೩೮ ರ ಆಗಸ್ಟ್ ೧೫ ರಲ್ಲಿನ ೧೦೮ ನೇ ಸಂಖ್ಯೆಯ ಶಾಸನವು ಅಚ್ಯುತರಾಯ ಸತ್ರಕ್ಕೆ (ಅನ್ನದಾನಕೇಂದ್ರ) ಹಾಗೂ ಅಚ್ಯುತ ಪೆರುಮಾಳ್ ನೈವೇದ್ಯಕ್ಕೆ ಶ್ರೀಭಂಡಾರದಿಂದ ಉಂಟುಮಾಡಿದ ಸಾಹಿತ್ಯ ಸಾಮಗ್ರಿಯ ಸರಬರಾಜಿನ ವಿವರವನ್ನೂ, ನೈವೇದ್ಯದ ಭಾಗವನ್ನು ಸ್ವೀಕರಿಸುವವರನ್ನೂ ತಿಳಿಸುತ್ತದೆಯಾಗಿ ಅಚ್ಯುತರಾಯಪುರದಲ್ಲಿ ಆಲಯದ ಶ್ರೀಭಂಡಾರವನ್ನು ಆಲಯಕ್ಕಾಗಿಯೂ, ಅನ್ನದಾನ ಸತ್ರಕ್ಕಾಗಿಯೂ ಏರ್ಪಡಿಸಿದ್ದಂತೆ ಕಂಡುಬರುತ್ತದೆ. ಇಂದು ಶಿಥಿಲಗಳನ್ನೂ, ಜೀರ್ಣವಾದ ಒಂದು ಗೋಪುರ ಹಾಗೂ ಬಾವಿಗಳ ಹೊರತು ಆಲಯದ ಗುರುತಾಗಲೀ, ಅಚ್ಯುತಪೆರುಮಾಳ್ ಆಗಲೀ ಮನೆಗಳಾಗಲೀ, ಸತ್ರವಾಗಲೀ ಇಲ್ಲ. ಕ್ರಿ.ಶ. ೧೫೬೫ ರ ತಾಳೀಕೋಟೆ ಯುದ್ಧಾನಂತರದ ವಿಜಯನಗರದ ವ್ಯಾಪಕ ಪತನದ ದಲ್ಲಿ ವಿರೋಧಿಗಳ ಸಂಯುಕ್ತ ಸೈನ್ಯದ ಧಾಳಿಯಲ್ಲಿ ಇವೆಲ್ಲ ನೆಲಕಚ್ಚಿರಬೇಕು.

ತಿರುಮಲೆ - ತಿರುಪತಿಗಳಲ್ಲಿನ ಉತ್ಸವಗಳಿಗೆ ಮೆರುಗು ನೀಡಲು ಅವುಗಳ ವೈಭವವನ್ನು ಹೆಚ್ಚಿಸಲು, ಹೆಚ್ಚಿನ ಜನರನ್ನು ಉತ್ಸವಗಳಿಗೆ ಆಕರ್ಷಿಸಲು ಬಂದವರಿಗೆ ಹೆಚ್ಚಿನ ಹರ್ಷವನ್ನು ಹ್ಲಾದವನ್ನುಂಟು ಮಾಡಲು, ಶ್ರೀ ವೆಂಕಟೇಶ್ವರಸ್ವಾಮಿಯ ಉತ್ಸವ ಮೂರ್ತಿಗಳು ಊರ ಮೆರವಣಿಗೆಯಲ್ಲಿ ಹೊರಬಂದಾಗ, ತಮ್ಮ ನಾಟ್ಯಸೇವೆಯನ್ನು ಸಮರ್ಪಿಸಲು ವಿಜಯನಗರದ ರಾಜಾಸ್ಥಾನದ ಹಲವು ನರ್ತಕಿಯರನ್ನು ಅಚ್ಯುತರಾಯನು ಕಳುಹಿಸಿಕೊಟ್ಟ. ಇಂತಹ ನರ್ತಕಿಯರ ತಂಡದಲ್ಲಿ ಕುಪ್ಪಾಸಾನಿಯ ಮಗಳು ಮುದ್ದು ಕುಪ್ಪಾಯಿಯೂ ಒಬ್ಬಳು. ಕುಪ್ಪಾಸಾನಿಯು ಕೃಷ್ಣದೇವರಾಯನ ಆಸ್ಥಾನಕ್ಕೆ ಸೇರಿದ ತನ್ನ ತಂದೆ ಶ್ರೀರಂಗರಾಯನಂತೆಯೇ ವಿದ್ವತ್ ಸಭಾ ರಾಯರಂಜಕಂ ಬಿರುದನ್ನು ಪಡೆದಿದ್ದಳು. ಕೃಷ್ಣದೇವರಾಯನೇ ಘನವಾದ ವಿದ್ವಾಂಸನೆಂಬುದು ಅವನ ತೆಲುಗು ಕಾವ್ಯ ಆಮುಕ್ತಮಾಲ್ಯದದಿಂದ ತಿಳಿದು ಬಂದು, ವಿದ್ವತ್ ಸಭೆಯ ಪ್ರಭುವೂ ಆಗಿದ್ದ. ಆತನ ಮನವನ್ನು ರಂಜಿಸುವ ಶ್ರೀರಂಗರಾಯ ಹಾಗೂ ಆತನ ಪುತ್ರಿ ಕುಪ್ಪಾಸಾನಿಯರು ನೃತ್ಯವೃಂದದ ಮುಖ್ಯರಾಗಿ 'ರಂಜಕಂ' ಬಿರುದಿಗೆ ಪಾತ್ರರಾಗಿದ್ದರು. ತಿರುಮಲೆಯ ಶ್ರೀ ವೆಂಕಟೇಶ್ವರನ ಆಲಯಕ್ಕೆ ನೃತ್ಯಗಾರ್ತಿಯಾಗಿ ಕಳುಹಿಸಲ್ಪಟ್ಟ ಮುದ್ದು ಕುಪ್ಪಾಯಿಗೆ ತಿರುಪತಿಯ ಗೋವಿಂದರಾಜಸ್ವಾಮಿ ಆಲಯದಿಂದ ದಿನವೂ ಪ್ರಸಾದ ಪಡೆಯಬೇಕೆಂದು ಅಪ್ಪಣೆಯಾಗಿ ಸ್ಥಾನತ್ತಾರರು ಈ ಆಜ್ಞೆಯನ್ನು ೬-೬-೧೫೩೧ ರಿಂದ ಜಾರಿಗೆ ತಂದರು. (ಸಂ-೧೧) ಅಚ್ಯುತರಾಯನಿಂದ ತಿರುಮಲೆಯ ಆಲಯಕ್ಕೆ ಕಳುಹಿಸಲ್ಪಟ್ಟ ಮತ್ತೊಬ್ಬ ನರ್ತಕಿ ಉದ್ದಿನ ತಿಮ್ಮಯ್ಯನ ಪುತ್ರಿ ಹನುಮಾಸಾನಿ. ಈಕೆ ಸಾಕಷ್ಟು ಸ್ಥಿತಿವಂತಳಾಗಿರಬೇಕು. ತಿರುಮಲೆಯಲ್ಲಿ ಒಂದು ಪುಷ್ಪೋದ್ಯಾನವನ್ನು ನಿರ್ಮಿಸಿ ಅದರಲ್ಲಿ ಒಂಧು ಮಂಟಪ ಕಟ್ಟಿಸಿ, ಅಂದು ನಡೆಯುತ್ತಿದ್ದ ಹತ್ತು ಬ್ರಹ್ಮೋತ್ಸವಗಳ ಏಳನೇ ದಿನಗಳಲ್ಲೂ, ವಿಜಯ ದಶಮಿಯಂದೂ ಮತ್ತೆರಡು ದಿನಗಳಲ್ಲೂ, ಮಲೆಯಪ್ಪಸ್ವಾಮಿಗೆ ನಿವೇದನೆಗೆಂದೂ, ತಿರುಪತಿಯ ಗೋವಿಂದರಾಜಸ್ವಾಮಿಯ ಆಲಯದ ದ್ವಾರ ಗೋಪುರದ ಪಕ್ಕದ ಶ್ರೀ ಸುದರ್ಶನನಿಗೂ ನಿವೇದನೆಗೆಂದು ೮೨೦ ನರ್ಪಣಗಳ ನಿಧಿಯನ್ನು ದತ್ತಿ ನೀಡಿ ಅದರ ಬಡ್ಡಿಯನ್ನು ಬಳಸಬೇಕು ಎಂದು ಕಟ್ಟಳೆ ಮಾಡಿದಳು (ಸಂಖ್ಯೆ-೧೪೨).


ಕಪಿಲ ತೀರ್ಥ

ತಿರುಮಲೆ ತಿರುಪತಿ ದೇವಾಲಯಗಳಲ್ಲಿ ನರ್ತನ ಸೇವೆಗೆಂದು ನಿಯುಕ್ತರಾದ ನರ್ತಕಿಯರಲ್ಲಿ ಹಲವರು ನರ್ತನ ಸೇವೆಯನ್ನೇ ಅಲ್ಲದೆ ಅಲ್ಲಿನ ದೇವರುಗಳಿಗೆ ನೈವೇದ್ಯ ಸಮರ್ಪಣೆಗಾಗಿ ದಾನಗಳನ್ನೂ ನೀಡಿದ್ದಾರೆ. ೧೪೬ನೇ ಶಾಸನದಂತೆ ದೇಸಿಗೆಯ ಉತ್ಸವದ ೨೦ ದಿನಗಳಲ್ಲಿ ಪ್ರತಿದಿನವೂ ಮಲೆಯಪ್ಪಸ್ವಾಮಿಗೆ ಪಚ್ಚಕರ್ಪೂರ ಹಾಗೂ ಸುಗಂಧದ ಹಾಲು ನಿವೇದನೆಗಾಗಿಯೂ, ಆಣಿ ಮಾಸದ ಕಾರ್ತೀಕ ನಕ್ಷತ್ರದಂದು ಗೋವಿಂದರಾಜಸ್ವಾಮಿ ಆಲಯದ ಗೋಪುರದ ಬಳಿಯ ಸುದರ್ಶನರಿಗೆ ಒಂದು ದೋಸೆ ಪಡಿಯನ್ನು ಸಮರ್ಪಿಸಲೂ, ೩೦-೪-೧೫೪೦ ರಲ್ಲಿ ತಿಪ್ಪಾಸಾನಿಯ ಇಬ್ಬರು ಹೆಣ್ಣುಮಕ್ಕಳು ಲಿಂಗಾಸಾನಿ ಹಾಗೂ ತಿರುವೆಂಕಟ ಮಾಣಿಕ್ಯಂ ಅವರು ೧೬೫೦ ನರ್ಪಣಗಳನ್ನು ನೀಡಿದರು. ಹೀಗೆಯೇ ತಿರುಮಲೆಯ ನರ್ತಕಿಯರಲ್ಲಿ ಒಬ್ಬಳಾದ ಎಕ್ಕುವಿನ ಮಗಳು - ನಾಚ್ಚಿ - ಕ್ರೋಧನ ಸಂವತ್ಸರಗಳಲ್ಲಿ ವೆಂಕಟೇಶ್ವರನಿಗೆ ವಿಶೇಷ ನಿವೇದನೆಗಾಗಿ ದತ್ತಿ ನೀಡಿದಳು (ಸಂ-೧೮೫). ❋

ಸಾಧು ಸುಬ್ರಹ್ಮಣ್ಯಶಾಸ್ತ್ರಿಗಳು ತಿ. ತಿ. ದೇವಸ್ಥಾನಗಳ ಮೊದಲನೆಯ ಶಾಸನ ತಜ್ಞರು. ಆಲಯದ ಪೇಷ್ಕಾರರಾಗಿ ಸೇವೆಸಲ್ಲಿಸುತ್ತ ಶಾಸನಾಧ್ಯಯನ ಮಾಡಿ, ತಿರುಮಲೆ-ತಿರುಪತಿ ಆಲಯಗಳ ಎಲ್ಲ ಶಾಸನಗಳನ್ನೂ ಓದಿ, ಪ್ರತಿಮಾಡಿ, ಹಲವು 'ಸಂಪುಟಗಳಲ್ಲಿ ಪ್ರಕಾಶಪಡಿಸಿದ ಹಿರಿಯರು. ಅವರ ಎಪಿಗ್ರಾಫಿಕಲ್ ರಿಪೋರ್ಟಗಳನ್ನು ಹಿರಿಯ ಇತಿಹಾಸಜ್ಞರೂ ಮಾನ್ಯಮಾಡಿದ್ದಾರೆ. 'ಶ್ರೀ ವೆಂಕಟೇಶ್ವರ' ಅವರ ವ್ಯಾಪಕ ಶಾಸನಾಧ್ಯಯನ ಸಂಶೋಧನೆಗಳ ರಸಘಟ್ಟಿ. ಅದನ್ನು ಶ್ರೀ ಗೋಪೀಕೃಷ್ಣ ಅವರು ಸಂಪಾದಿಸಿದ್ದು - ಅದರಲ್ಲಿನ ಒಂದುಭಾಗ - ಅಚ್ಯುತರಾಯ - ತಿರುಮಲೆಯನ್ನು ಇಲ್ಲಿ ಸಾದರ ಪಡಿಸಲಾಗಿದೆ.

# ಹರಿದಾಸರು ಕಂಡ ಬ್ರಹ್ಮೋತ್ಸವ

---ಎಸ್. ವಿ. ಹೇಮಾವತಿ.

ಕಲೌ ವೆಂಕಟನಾಯಕಃ ಎಂಬುದು ತಿರುಪತಿಯ ಶ್ರೀನಿವಾಸನ ಖ್ಯಾತಿ. ಅವನಿಗೆ ನಡೆದುಕೊಳ್ಳದ ಭಕ್ತರು ಕಡಿಮೆ ಅಥವಾ ಇಲ್ಲವೆಂದರೂ ಆದೀತು -- ಅಷ್ಟು ವ್ಯಾಪ್ತಿ ಅವನ ಭಕ್ತಪ್ರೀತಿಗೆ. ಬ್ರಹ್ಮನಿಂದ ಆರಂಭವಾಗಿ ರುದ್ರೇಂದ್ರಾದಿ ಮರುತರೂ ನಾರದ ತುಂಬರೇತ್ಯಾದಿ ದೇವಗಾಯಕರೂ, ಭೃಗುವಶಿಷ್ಠ ಕಶ್ಯಪರಾದಿ ಮುನಿಗಳೂ ಅವನ ಕಡೆಗಣ್ಣನೋಟದ ನಿರೀಕ್ಷಣೆಯವರೇ, ಲಕ್ಷ್ಮಿಯಂತೂ ನಿತ್ಯಾನಪಾಯಿನಿಯಾಗಿ ವಕ್ಷಸ್ಥಲವಾಸಿಯಾಗಿ, ಹರಿಯನುಚರಗಣದಲ್ಲಿ ಪ್ರಥಮಳಾಗಿ ನಡೆದಿದ್ದಾಳೆ. ಇಂಥ ಮಹಾಮಹಿಮನಾದ ನಿತ್ಯಕಲ್ಯಾಣ ಮೂರ್ತಿಯಾದ ಶ್ರೀ ವೆಂಕಟೇಶ್ವರನಿಗೆ ಬ್ರಹ್ಮನೇ ಮುಂದೆ ನಿಂತು ಮಾಡಿದ ಉತ್ಸವ ಬ್ರಹ್ಮೋತ್ಸವ ಎಂದರೆ ಅದರ ವೈಭವವು ಅನೂಹ್ಯವಾದುದೇ ಸರಿ. ಕಲಿಯುಗದ ವೈಕುಂಠವೆನಿಸಿದ ತಿರುಪತಿಯಲ್ಲಿ ಈ ಸಂಭ್ರಮದ ಉತ್ಸವವು ಆಶ್ವಯುಜ ಪ್ರತಿಪದೆಯಿಂದ ದಶಮಿಯವರೆಗಿನ ಹತ್ತು ದಿನಗಳ ನವರಾತ್ರಿಯಲ್ಲಿ ಸಡಗರ ಹಾಗೂ ಸಂಭ್ರಮಾತಿಶಯಗಳಿಂದ ನೆರವೇರಿಸಲ್ಪಡುವುದು. ಇಂತಹ ಬ್ರಹ್ಮೋತ್ಸವದ ಬಗ್ಗೆ ಹರಿದಾಸರು ತಾವು ಕಂಡು ಅನುಭವಿಸಿದ ಸ್ವಾಮಿಯ ಲೀಲಾವಿನೋದಗಳನ್ನು ತಮ್ಮ ಸಂಕೀರ್ತನೆಗಳಲ್ಲಿ ಹಾಡಿ ಹೊಗಳಿದ್ದಾರೆ. ಅದರ ಬಗೆಗಿನ ಒಂದು ಪುಟ್ಟ ಮಾಹಿತಿಯನ್ನು ನೀಡುವುದೇ ಈ ಲೇಖನದ ಉದ್ದೇಶ.

ಕನ್ನಡದ ಹರಿದಾಸರು ಸಪ್ತಗಿರೀಶನನ್ನು ತಿರುಪತಿ ತಿಮ್ಮಪ್ಪನೆಂದು ವೆಂಕಟಶೈಲವಲ್ಲಭನೆಂದು ಕೋನೇರಿ ರಾಯನೆಂದು ಹತ್ತು ಹಲವು ಅಭಿಧಾನಗಳಿಂದ ಹಾಡಿ ನಲಿದಿದ್ದಾರೆ. ಹರಿದಾಸರಲ್ಲಿ ಮೊದಲಿಗರೆನಿಸಿದ ಶ್ರೀಪಾದರಾಯರು ಶ್ರೀರಂಗದಲ್ಲಿ ಶಿಕ್ಷಣವನ್ನು ಮುಗಿಸಿ ಮುಳುಬಾಗಲಿನಲ್ಲಿ ನೆಲೆನಿಂತರು. ಅಲ್ಲಿಂದ ತಿರುಪತಿ ಮೂರು ನಾಲ್ಕು ದಿನದ ಹಾದಿ, ಹಾಗಾಗಿ ಅಲ್ಲಿಂದ ಹರಿದಾಸ ತರಂಗಿಣಿಯ ಮೂಡಲಗಿರಿ ಯಾತ್ರೆ ಆರಂಭವಾಯಿತು. ವ್ಯಾಸರಾಯರು ಹನ್ನೆರಡು ವರ್ಷ ತಿರುಪತಿಯಲ್ಲಿಯೇ ಇದ್ದು ಸ್ವಾಮಿ ಸೇವೆ ಮಾಡಿ ಕೃತಾರ್ಥರಾಗಿರುವರು. ಶ್ರೀನಿವಾಸ ನಾಯಕರಾಗಿದ್ದವರೇ ಮುಂದೆ ಪುರಂದರದಾಸರಾದರು. ಕನಕದಾಸರು ಬಾಡದವರಾದರೂ ಮೊದಲಿನ ಹೆಸರು ತಿಮ್ಮಪ್ಪನೆಂದೇ. ವಾದಿರಾಜರು ತೀರ್ಥಪ್ರಬಂಧದಲ್ಲೂ ಉಲ್ಲೇಖಿಸಿರುವ ಸ್ಥಳ ತಿರುಪತಿ. ಹೀಗೆ ಅಂದಿನಿಂದ ಇಂದಿನವರೆಗೂ ಹರಿದಾಸರ ಕರ್ಷಕ ಕೇಂದ್ರಗಳಲ್ಲಿ ಒಂದಾಗಿ ಮೆರೆದದ್ದು ತಿರುಪತಿ. (ಮತ್ತೆರಡು ಕೇಂದ್ರಗಳೆಂದರೆ ಉಡುಪಿ ಹಾಗೂ ಪಂಢರಪುರ)



ಪುರಂದರದಾಸ

ಶ್ರೀಪಾದರಾಜರ ಕಾಲದಲ್ಲಿ ತಿರುಮಲೆಯಲ್ಲಿ ಬ್ರಹ್ಮೋತ್ಸವ ನಡೆಯುತ್ತಿದ್ದಿತೇ ಎಂದರೆ ಹೌದು ಎನ್ನದೇಕಾಗುತ್ತದೆ. ಅವರಿಗೆ ಭಾಗವತದ ದಶಮಸ್ಕಂಧದ ಕೃಷ್ಣಕಥೆಯಲ್ಲಿ ಪ್ರೀತಿ ಹೆಚ್ಚು. ಪೋಪು ಹೋಗೋಣ ಬಾರೋ ರಂಗ, ಮನೆಯೊಳಗಾಡೋ ರಂಗಯ್ಯ, ಭ್ರಮರಗೀತೆಯೂ ಇದಕ್ಕೆ ಪೂರಕ ಕೀರ್ತನೆಗಳು, ಹರೇವೆಂಕಟ ಶೈಲವಲ್ಲಭ, ಭೂಷಣಕೆ ಭೂಷಣ ಇದು ಭೂಷಣ, ಶೇಷಗಿರಿ ವಾಸ ಶ್ರೀವರ ವೆಂಕಟೇಶ ಎಂಬ ಧಾಟಿಯೇ ಹೆಚ್ಚಿಗೆ ಕಂಡು ಬಂದರೂ ಬ್ರಹ್ಮೋತ್ಸವದ ವೈಭವವನ್ನು ಸ್ಪಷ್ಟವಾಗಿ ವಿವರಿಸುವ ಕೃತಿಗಳು ಯಾವುವೂ ಇಲ್ಲ. ಒಂದು ಕೀರ್ತನೆಯಲ್ಲಿ ಮಾತ್ರ ಸ್ವಾಮಿಯು ಊರ ಮೆರವಣಿಗೆಗೆ ಹೊರಟ ಚಿತ್ರದ ವಿವರಣೆ ಇದೆ.

ಸಾಗಿ ಬಾರಯ್ಯ ನೀ ಬಾಗಿ ನಮಿಸುವೆ
ಯೋಗಿಗಳ ರಸನೇ ಶ್ರೀನಿವಾಸಾ
ಭೋಗಿ ಶಯನನೆ ನಿನ್ನ ಭಾಗವತರು ಬಂದು
ಜಾಗು ಮಾಡದೆ ನಿನ್ನ ಬಾಗಿಲೊಳು
ನಿಂದಿಹರೋ

ಕೀರ್ತನೆಯು ಹೀಗೆ ಮುಂದುವರೆಯುತ್ತ ನೃಸಿಂಹ ರಾಮಾವತಾರಗಳನ್ನು ವಿವರಿಸಿ ಕೊನೆಗೆ ಜೀವನಿಗೆ ಉತ್ತಮ ಸಂಗವನ್ನು ನೀಡೆಂಬ ದೇಡಿಕೆಯೊಂದಿಗೆ ಮುಗಿಯುವುದು.

ಶ್ರೀಪಾದರಾಜರ ಶಿಷ್ಯರು ವ್ಯಾಸರಾಯರು, ಕನ್ನಡದ ದಾಸಕೂಟವನ್ನು ಸ್ಥಾಪಿಸಿದ ಹಿರಿಯರು. ಅವರು ತಿರುಪತಿಯ ಸ್ವಾಮಿಯನ್ನು ಹನ್ನೆರಡು ವರ್ಷ ಸೇವಿಸಿದರೆಂಬುದು ಜನಜನಿತವಾಗಿದೆ. ಅವರ ಸ್ವಾಮಿ ಸೇವೆಯ ಗುರುತಾಗಿ ಶಾಸನಾಧಾರಗಳೂ ಇವೆ. ಅಂದಿನ ವಿಜಯನಗರದರಸರು ಸ್ವಾಮಿಗಳಿಗೆ ದತ್ತಿಗಳನ್ನು ನೀಡಿದ್ದು, ವ್ಯಾಸರಾಯರು ದೇವರ ಪೂಜೆಗಾಗಿ ದತ್ತಿ ನೀಡಿದ್ದು ಶಾಸನಗಳಲ್ಲಿ ವಿವರಣೆ ಪಡೆದಿವೆ. ಆದರೆ ಅವರು ಬರೆದ ಒಂದು ಸ್ತುತಿ ಮಾತ್ರವೇ ದೊರಕಿದೆ. ಅದೇ ಪ್ರಾತಃಸ್ಮರಣೆಯ ಸ್ತೋತ್ರ.

ಪ್ರಾತಃ ಸ್ಮರಾಮಿ ರಮಯಾ ಸಹ ವೆಂಕಟೇಶಂ
ಮಂದಸ್ಮಿತಂ ಮುಖ ಸರೋರುಹ ಕಾಂತಿರಮ್ಯಂ
ಮಾಣಿಕ್ಯಕಾಂತಿ ವಿಲಸನ್ಮಕುಟೋರ್ಧ್ವಪುಂಡ್ರಂ
ಪದ್ಮಾಕ್ಷಲಕ್ಷಮಣಿ ಕುಂಡಲ ಮಂಡಿತಾಂಗಂ
ಪ್ರಾತರ್ಭಜಾಮಿ ಕರರಮ್ಯ ಸಶಂಖ ಚಕ್ರಂ
ಭಕ್ತಾಭಯಪ್ರದ ಕಟಿಸ್ಥಲ ದತ್ತ ಪಾಣಿಂ
ಶ್ರೀವತ್ಸ ಕೌಸ್ತುಭ ಲಸನ್ಮಣಿ ಕಾಂಚನಾಢ್ಯಂ
ಪೀತಾಂಬರಂ ಮದನಕೋಟಿ
ಸುಮೋಹ ನಾಂಗಂ

ಪ್ರಾತರ್ನಮಾಮಿ ಪರಮಾತ್ಮಪಾದಾರವಿಂದಂ
ಆನಂದ ಸಾಂದ್ರ ನಿಲಯಂ ಮಣಿನೂಪುರಾಢ್ಯಂ
ಏತತ್ಸಮಸ್ತ ಜಗತಾಮಿತಿ ದರ್ಶಯಂತಂ
ವೈಕುಂಠ ಮತ್ರ ಭಜತಾಂ ಕರಪಲ್ಲವೇನ

ಪುರಂದರ ದಾಸರು ವ್ಯಾಸರಾಯರ ಶಿಷ್ಯರು. ಕನಕದಾಸ, ವಾದಿರಾಜ ಮೊದಲಾದವರ ಸಹಾಧ್ಯಾಯಿಗಳು. ಅವರಿಗೆ ತಿರುಪತಿ ತಿಮ್ಮಪ್ಪನೆಂದರೆ ಬಹಳ ಭಕ್ತಿ. ಅವರ ಕೀರ್ತನೆಗಳು ನಾಲ್ಕು ಲಕ್ಷ ಎಪ್ಪತ್ತೈದು ಸಾವಿರವೆಂದು ವಿಜಯದಾಸರ ಹೇಳಿಕೆ. ಆದರೂ ಉಪಲಬ್ಧವಿರುವ ಕೀರ್ತನೆಗಳು ಅತ್ಯಲ್ಪವೇ ಎನ್ನಬಹುದು. ಸುಮಾರು ೪೦ ಕೃತಿಗಳು ತಿರುಪತಿಯ ಶ್ರೀನಿವಾಸನ ಬಗೆಗೆ ರಚಿತವಾದುವುಗಳು. ಒಂದು ಕೀರ್ತನೆಯಲ್ಲಿ ಮಾತ್ರ ಪ್ರತಿವ

ರುಷ ಬ್ರಹ್ಮೋತ್ಸವ ತಿರುಮಲೆಯಲ್ಲಿ ನಡೆಯುತ್ತದೆ ಎಂಬುದನ್ನು ದಾಖಲಿಸಿದ್ದಾರೆ.

ಭೂಮಿಯ ಮೇಲೆ ಇಂದಿರೆಯ ಒಡಗೂಡಿ ವೆಂಕಟ ಬಂದು ನೆಲಸಿದ್ದಾನೆ. ಇವನನ್ನು ಭಜಿಸಿದರೆ ಬಂದ ಭಯ ನಿವಾರಣೆಯಾಗುತ್ತದೆ-ಎನ್ನುತ್ತಾ ದಾಸರು ಶ್ರೀನಿವಾಸನ ಆಲಯವನ್ನು ವಿವರಿಸಿದ್ದಾರೆ. ದ್ವಾರದೆಡ ಬಲದಲ್ಲಿ ಜಯ ವಿಜಯರಿಬ್ಬರೂ ಸೇರಿ ಸೇವಿಪರು ಎಂಬುದಾಗಿ. ಮೂರು ಚರಣಗಳಿರುವ ಈ ಕೀರ್ತನೆಯಲ್ಲಿ ದೇವರ ಅಲಂಕಾರವನ್ನು ವಿವರಿಸಲಾಗಿದೆ. ವಾರಂವಾರವೂ ಪೂಜೆಗೊಳುವ ಅವನು ಮಕುಟಾಭರಣ ಕುಂಡಲಧಾರಿ, ಭುಜ ಕೇಯೂರ ಭೂಷಿತ, ಮಾರಪಿತನು, ಆಕಾರದಲ್ಲಿ ಮಾತ್ರವಲ್ಲ ಗುಣದಲ್ಲಿಯೂ ಮೋಹನಾಂಗನೆಂದು ಗುಣಗಾನ ಮಾಡಿದ್ದಾರೆ. ಎಲ್ಲ ಭಕ್ತರ ಆಸೆಯನ್ನು ಪೂರೈಸಲೆಂದೇ ಶೇಷಾದ್ರಿ ನಿಲಯನಾಗಿ, ಇಡೀ ಸೃಷ್ಟಿಗೆ ಉಲ್ಲಾಸ ನೀಡುವವನಾಗಿರುವ 'ಇಂದುಧರ ಸುರವೃಂದನುತ ಗೋವಿಂದ ಘನ ದಯಾಸಿಂಧು ಶ್ರೀಹರಿ'ಯು ಇಲ್ಲಿ ನೆಲಸಿರುವನೆಂದೂ ಹೇಳಿದ್ದಾರೆ. ಆತ ಪದಕ ಕೌಸ್ತುಭಗಳನ್ನು ಸುದರುಶನದ ಅರೆಗಳನ್ನೂ ಧರಿಸಿದವ. ನೂಪುರವಿದೆ ಪದಯುಗದಲ್ಲಿ. ತುದಿ ಮೊದಲು ಮಧ್ಯಗಳಿರದವನೂ ತ್ರಿದಶ ಪೂಜಿತನೂ ತ್ರಿಭುವನೇಶನೂ ಆದ ಆತ,

ಸದುವಿಲಾಸದಿ ಸ್ವಾಮಿ ತೀರ್ಥದಿ
ಉದಿಸುತಿರೆ ಸಿರಿ ಮಹಿಳೆ ಸಹಿತದಿ
ಪದುಮನಾಭ ಪುರಂದರ ವಿಠಲನು
ಪ್ರತಿವರುಷ ಬ್ರಹ್ಮೋತ್ಸವದಿ ಮೆರೆಯುತ

-ಬಂದು ನಿಂತಿರುವುದನ್ನು ನೋಡ ಬನ್ನಿ ಎಂದು ಜನರನ್ನು ಕರೆಯುತ್ತಾರೆ. (ಇದಕ್ಕೆ ಪಾಠಾಂತರವೂ ಇದೆ. ನಿರುತ ಪರುಷದಿ ಬ್ರಹ್ಮೋತ್ಸವದಿ ಮೆರೆಯುತ) ಇನ್ನೊಂದು ಕೀರ್ತನೆಯಲ್ಲಿ ಮುತ್ತಿನ ಪಲ್ಲಕ್ಕಿ ವಾಹನವನ್ನು ವಿವರಿಸುತ್ತಾರೆ. ಸಹೋದರಿಯೊಬ್ಬಳಿಗೆ ಅನುಭಾವವನ್ನು ಆತ್ಮೀಯತೆಯಿಂದ ವಿವರಿಸುವ ಈ ಕೀರ್ತನೆ ಪುಟ್ಟ ಮಹಾಕಾವ್ಯದಂತಿದೆ.

ಕನಸು ಕಂಡೆನೆ ಮನದಲಿ ಕಳವಳಗೊಂಡೆನೆ
ಏನು ಹೇಳಲಿ ತಂಗಿ ತಿಮ್ಮಯ್ಯನ ಪಾದವ ಕಂಡೆ

ಸ್ವಾಮಿಯು ಅವರಿದ್ದಲ್ಲಿಗೇ ಬಂದು ಅವರ ಮುಂದೆ ನಿಂತಿದ್ದ ಎಂಬುದು ಕನಸೋ ನನಸೊ ತಿಳಿಯದ ಸ್ಥಿತಿ ದಾಸರಿಗೆ. ಆದ್ದರಿಂದಲೇ ಮನದಲ್ಲಿ ಕಳವಳ. ಆದರೆ ಅದು ನಿಜವೂ ಆಗಿರಬೇಕು - ಕಾರಣ ಆ ಕನಸೆಂಬುದರ ವಿವರಗಳು - ಪೊನ್ನಕಡಗ, ಹೊಳೆಯುವ ತಿರುನಾಮ, ನಡೆದು ಬರುವಾಗ ಘಲ್ಲೆನ್ನುವ ಅಂದುಗೆ, ಮಕರ ಕುಂಡಲಧಾರಿ - ಕಸ್ತೂರಿ ತಿಲಕಧಾರಿ - ಸ್ವಾಮಿಯ ಬರವಿಗೆ ಕಣ್ಣು, ಕಿವಿಗಳೆರಡೂ ಸಾಕ್ಷಿ ಹೇಳುತ್ತವೆ. ಜೊತೆಗೆ ಅಷ್ಟು ಮಾತ್ರವಲ್ಲದೇ ಸುತ್ತಣ ಪರಿಸರವನ್ನೂ ವಿವರಿಸುತ್ತಾರೆ.

ಮುತ್ತಿನ ಪಲ್ಲಕ್ಕಿ ಯತಿಗಳು
ಹೊತ್ತು ನಿಂತಿದ್ದರಲ್ಲೆ ಛತ್ರಚಾಮರದಿಂದ
ರಂಗಯ್ಯನ ಉತ್ಸವ ಮೂರುತಿಯ

ಜೊತೆಗ ವಾಯು ದೊಮ್ಮಾದಿಗಳೂ ರಂಗಯ್ಯನ ಸೇವೆ ಮಾಡಲು ಬಂದಿದ್ದರಂತೆ. ಬ್ರಹ್ಮೋತ್ಸವದಲ್ಲಿ ನಿರಾಕಾರದ ಬ್ರಹ್ಮರಥ ಹೊರಡುವುದೂ ಸಹಜವೇ ಆಗಿದೆ; ವಾಯುವೂ ಅದೃಶ್ಯನೇ. ದಾಸರ ವಿವರದಲ್ಲಿ ಖಚಿತತೆಯಿದೆ. ಎಂತಲೇ ಅದು ಕನಸಲ್ಲವೆಂಬ ಭರವಸೆ. ಆದರೂ ಆತ ಅವರ ಹೃದಯ


ವಿಜಯದಾಸ

ಮಂಟಪದಲ್ಲಿ ಸೇರಿ ಹೋದ ನಂತರ ಅದೇನು ಕನಸೋ ಎಂಬ ಕಳವಳ.

ಇನ್ನೊಂದು ಕೀರ್ತನೆ ನೇರವಾಗಿ ದಾಸರು ಪಲ್ಲಕ್ಕಿ ಸೇವೆಯಲ್ಲಿ ಭಾಗವಹಿಸಿದುದನ್ನು ವಿವರವಾಗಿ ತೆರೆದಿಟ್ಟಿದೆ.

ಧ್ವಜದ ತಿಮ್ಮಪ್ಪ ಪಲ್ಲಕ್ಕಿಯೇರಿ ತನ್ನಯ
ನಿಜಗಿರಿ ಯಾತ್ರೆ ಗೈದಿದ ಹರುಷವ ಕೇಳಿ

ಬ್ರಹ್ಮೋತ್ಸವದ ಆರಂಭದಲ್ಲಿ ಗರುಡ ಧ್ವಜದ ಆರೋಹಣ ವಾಗಬೇಕು. ಚಕ್ರಸ್ನಾನವಾದ ನಂತರವೇ ಅದರ ಅವರೋಹಣ. ಜೊತೆಗೆ ತಿಮ್ಮಪ್ಪ ದೇವಸಾರ್ವಭೌಮ: ಧ್ವಜವಿಲ್ಲದೆ ಹೊರ ಬರುವುದಾದರೂ ಸಾಧ್ಯವೇ!

ಸ್ವಾಮಿ ಮೆರವಣಿಗೆಯಲ್ಲಿ ಹೊರಬರಲು ಬಲಭಾಗದಲ್ಲಿ ಬ್ರಹ್ಮರುದ್ರರೂ, ಎಡದಲ್ಲಿ ಧ್ವನಿಯೆತ್ತಿ ಹಾಡುತ್ತ ವೇದ ಉಪನಿಷತ್ತುಗಳು, ಮುಂದೆ ಸನಕಾದಿಗಳೂ ಹಿಂದೆ ಹಲವಾರು ಋಷಿ ಮುನಿಗಳ ಗುಂಪೂ ಬರುತ್ತಿದೆಯಂತೆ. ಸಾರ್ವಭೌಮನ ಶ್ವೇತ ಛತ್ರವನ್ನು ಹಿಡಿದು ನಡೆದಿದ್ದಾಳೆ, ಇಂದ್ರನ ಪತ್ನಿ ಶಚೀದೇವಿ. ದೇವರ ಪಕ್ಕದಲ್ಲೇ ಚಾಮರ ಹಿಡಿದು ಶಚೀಪತಿ ಇಂದ್ರನಿದ್ದಾನೆ. ಮನ್ಮಥ ಬೀಸಣಿಗೆ ಹಿಡಿದು ಬರುತ್ತಿರಲು ಹಡಪಧಾರಿ ಹನುಮಂತ ವೀಳೆಯದೆಲೆ ಮಡಿಸಿ ನೀಡುತ್ತಿದ್ದಾನೆ. ದೇವರ ಬಾಯ್ತಂಬುಲಕ್ಕೆಂದು ಚಂದ್ರ ಪೀಕದಾನಿ ಹಿಡಿದು ಬರುತ್ತಿದ್ದಾನೆ. ವರುಣ ಸ್ವಾದು ನೀರನ್ನು ಜೊತೆಗೇ ಹೊತ್ತು ತರುತ್ತಿರಲು ತನಗೆ ಆಧಾರದಂತೆ ತರುಣಿ ಸಿರಿದೇವಿ ಜೊತೆಯಲ್ಲಿದ್ದಾಳೆ. ರಕ್ಷಣೆಗೆಂದು ದೇವತೆಗಳೆಲ್ಲರೂ ಆಯುಧ ಧರಿಸಿ ಬಂದಿದ್ದಾರೆ.

ಊರಮೆರವಣಿಗೆಯಲ್ಲಿ ಸ್ವಾಮಿ ಬರುತ್ತಿರಲು ಗಂಧರ್ವರು ಮಂದರ, ಮಧ್ಯಮ, ತಾರಕಗಳಲ್ಲಿ ಹಾಡುತ್ತಿದ್ದಾರೆ. ತಾಳ ಮೇಳದಿ ನಾರದ ಹಾಡುತ್ತಾ ಆಡುತ್ತ ಬರುತ್ತಿದ್ದಾನೆ.

ಇಲ್ಲಿನ ಪಾತ್ರಗಳೆಲ್ಲ ಪುರಾಣ ಪ್ರಪಂಚದವರಾಗಿರುವಾಗ ಇದು ನಿಜವೇ ಎಂಬ ಇತಿಹಾಸಕಾರನ ಪ್ರಜ್ಞೆ ಕಳವಳಗೊಳ್ಳಬಹುದು. ಆದರೆ ತನ್ನ ಬೆಟ್ಟದ ಯಾತ್ರೆ ಮಾಡಿದ ಸ್ವಾಮಿ ಎಂದು ಆರಂಭದಲ್ಲಿಯೇ ಹೇಳಿರುವುದರಿಂದ ಭೂಮಿಯ ದೃಶ್ಯವೊಂದನ್ನು ಪುರಂದರದಾಸರು ಭೂಮದ ಮಟ್ಟಕ್ಕೇರಿಸಿದ್ದಾರೆ. ಎಂದೊಪ್ಪಲು ಅಡ್ಡಿಯಿಲ್ಲ.

ಕನಕದಾಸರು ಬಾಡದವರು. ಅವರಿಗೆ ಭಗವಂತನಲ್ಲಿ ಆತ್ಮೀಯತೆ ಹೆಚ್ಚು. ದೀನ ನಾನು ತನದ ವಿನಯವಂತಿಕೆಯನ್ನು ಮೆರೆದರೂ ಭಗವಂತನಲ್ಲಿ ಸ್ನೇಹ, ಬಳಕೆ ಹೆಚ್ಚು. ಪಾರ್ಥನಂತೆ, ಸುಗ್ರೀವನಂತೆ ಅವರಿಗೆ ದೇವರ ಕಲ್ಯಾಣಕ್ಕೆ ಬರಬೇಕೆಂಬ ಹಂಬಲ. ಬಂದರೆ ತಿರುಮಲೆಯ ಅಂದೂ ಇದ್ದಿರಬಹುದಾದ ಸಂದಣಿಯಲ್ಲಿ ಅವರಿಗೆ ಅಶನ ವಸತಿಗಳಿಗೆ ತೊಂದರೆಯುಂಟಾಗಿದ್ದಿರಬೇಕು ಎಂಬುದಲ್ಲ ಮುಖ್ಯ ಸ್ವಾಮಿಯ ಕಲ್ಯಾಣೋತ್ಸವವನ್ನು ಕಣ್ತುಂಬ ನೋಡುವುದಾಗದೆ ಹೋಗಿರಬೇಕು. ಎಂತಲೇ ಒಂದು ನಿಂದಾಸ್ತುತಿ ಮೈತಳೆಯಿತು.

ಬಂದೆವಯ್ಯಾ ಗೋವಿಂದ ಸೆಟ್ಟಿ
ಇಂದು ನಿಮ್ಮ ಕಲ್ಯಾಣ
ತೀರ್ಥಪ್ರಸಾದವುಂಟೆನಲಾಗಿ
ಶೇಷಗಿರಿಯಲಿ ವಾಸ ಮಾಡಿಕೊಂಡು
ದೇಶದೇಶಕ್ಕೆ ಹೆಸರಾದ ಶೆಟ್ಟಿ

ಕಾಸಿಗೆ ಕಾಸು ಬಡ್ಡಿಗಳಿಸಿಕೊಂಡು ಆದಿ
ಕೇಶವ ನಾರಾಯಣ ತಿಮ್ಮಶೆಟ್ಟಿ

ಹೀಗೆ ಮುಗಿಯುತ್ತದೆ ಕೀರ್ತನೆ. ಆ ಮೇಲೇನಾಯಿತು ಎಂಬುದು ಇಲ್ಲಿ ಅಪ್ರಸ್ತುತ. ಕನಕದಾಸರಿಗೆ ಸ್ವಾಮಿಯ ಕಲ್ಯಾಣೋತ್ಸವದ ಬಗ್ಗೆ ಮಾಹಿತಿಯಿದ್ದಿತು ಎಂಬುದಷ್ಟೇ ಮುಖ್ಯ.

ವಾದಿರಾಜರು ದಾಸಕೂಟ ವ್ಯಾಸಕೂಟಗಳೆರಡಕ್ಕೂ ಸೇರಿದವರು. ಅವರು ತಿರುಪತಿಯ ಸ್ವಾಮಿಯ ಬಗ್ಗೆ ಸಂಸ್ಕೃತ ಕನ್ನಡಗಳೆರಡರಲ್ಲೂ ಕೀರ್ತನೆಗಳನ್ನು ರಚಿಸಿರುವರು. ಅವರ ತೀರ್ಥ ಪ್ರಬಂಧದಲ್ಲಿಯೂ ತಿರುಪತಿ ಉಲ್ಲೇಖಿತವಾಗಿದೆ. ಆದರೂ ಇಲ್ಲಿನ ಉತ್ಸವಗಳ ಬಗ್ಗೆ ಹೇಳಿದ ಕೃತಿಗಳು ದೊರಕಿಲ್ಲ.

ವಿಜಯದಾಸರು ನಂತರದ ಹರಿದಾಸ ಗಣದಲ್ಲಿ ಬಹುಮುಖ್ಯರು. ಅವರಿಗೆ ತಿರುಪತಿಯೆಂದರೆ ಪ್ರಾಣ. ಸ್ವಾಮಿಯನ್ನು ಎಲ್ಲ ರೀತಿಯಲ್ಲೂ ನೋಡುವ ಬಯಕೆ. ಅವರ ಮೂರು ಕೀರ್ತನೆಗಳು ಬ್ರಹ್ಮೋತ್ಸವ ವರ್ಣನೆಗಳಲ್ಲಿ ಬಹುಮುಖ್ಯವಾಗುತ್ತವೆ.

ನಿನ್ನ ದರುಶನಕೆ ಬಂದವನಲ್ಲವೊ ಎಂದು ಆರಂಭವಾಗುವ ಕೀರ್ತನೆ ತನ್ನ ಧ್ವನಿಯಿಂದ ಹೃದಯಗಮವಾಗುವುದೇ ಅಲ್ಲದೆ ಮಲೆಯ ಮೇಲಿನ ಪರಿಸ್ಥಿತಿಯನ್ನೂ ವಿವರಿಸುತ್ತದೆ.

ನಿನ್ನ ದರುಶನಕೆ ಬಂದವನಲ್ಲವೋ ದೇವ
ಪುಣ್ಯವಂತರ ದಿವ್ಯಚರಣ ನೋಡಲು ಬಂದೆ
ಎಲ್ಲೆಲ್ಲಿಯೂ ನಿನ್ನ ವ್ಯಾಪ್ತಿ ತಾನಾಗಿರಲು
ಇಲ್ಲಿಗೇ ಬರುವ ಕಾರಣವ್ಯಾವುದೋ

ಹೀಗೆ ಅವನ ಸರ್ವಾಂತರ್ಯಾಮಿತ್ವವನ್ನೂ ಭಕ್ತಜನರಿರುವಲ್ಲಿಗೆ ಬರುವಿಕೆಯನ್ನೂ ಬಣ್ಣಿಸಿದ ನಂತರ ಮುಂದುವರೆಯುವರು.

ಕಠಿಣವೊ ನಿನ್ನ ಭಕುತರ ದರುಶನ ಲಾಭ
ಸಟೆಯಲ್ಲ ವೇದಗಳು ಸಾರುತಿಹವೊ
ಧ್ಯಾನಕೆ ಸಿಲುಕುವವನೆ ನಿನ್ನ ಕಾಣಲಿಬಹುದು
ಜ್ಞಾನಿಗಳು - ಎಂತು ಬರುವರೊ ಅಲ್ಲಿಗೆ
ಅನಂತ ಜನುಮದಲಿ ಜಪತಪ ಹೋಮ
ಏನೇನು ಮಾಡಿದರು
ಇಷ್ಟು ಜನ ಕೂಡುವರೊ ದೇವ

ಹೀಗೆ ಜನ ತಿರುಮಲೆಯಲ್ಲಿ ಸಾಂದ್ರವಾಗಿರುವುದನ್ನು ನೋಡಲು ಬಂದೆ ಎನ್ನುವ ವಿಜಯದಾಸರಿಗೆ ತಾವು ದೈವವನ್ನು ನಿಂದಿಸಿದಂತೆ ಆಗಲಿಲ್ಲವೇ ಎಂಬ

## ಗುರು ಜಗನ್ನಾಥದಾಸರ ಸ್ತವರಾಜ

ಲಕುಮಿ ಬೊಮ್ಮ ಭವಾಮರೇಶರು
ಭಕುತಿ ಪೂರ್ವಕ ನಿನ್ನ ಭಜಿಸೀ
ಸಕಲ ಲೋಕಕೆ ನಾಥರೆನಿಪರೊ ಸರ್ವಕಾಲದಲಿ
ನಿಖಿಳ ಜೀವರ ಪೊರೆಯೊ ದೇವನೆ
ಭಕುತಿ ನೀಯೆನ ಗೀಯದಿರಲು
ವ್ಯಕುತವಾಗ್ಯಪಕೀರ್ತಿ ಬಪ್ಪದೊ ಶ್ರೀನಿಕೇತನನೆ

ಯಾಕೆ ಪುಟ್ಟಿದೊ ಕರುಣ ಎನ್ನೊಳು
ಸಾಕಲಾರೆಯ ನಿನ್ನ ಶರಣನ
ನೂಕಿಬಿಟ್ಟರೆ ನಿನಗೆ ಲೋಕದಿ ಖ್ಯಾತಿ ಬಪ್ಪುದೆ
ನೋಕ ನೀಯನು ನೀನೆ ಎನ್ನನು
ಜೋಕೆಯಿಂದಲಿ ಕಾಯೊ ಬಿಡದಲೆ
ಏಕದೇವನು ನೀನೆ ವೆಂಕಟ ಶೇಷಗಿರಿವಾಸ

ಮದವು ಮತ್ಸರ ಲೋಭ ಮೋಹವು
ಒದಗಬಾರದು ಎನ್ನ ಮನದಲಿ
ಪದುಮನಾಭನೆ ಜ್ಞಾನಭಕ್ತಿ ವಿರಕ್ತಿ ನೀನಿತ್ತು
ಹೃದಯ ಮಧ್ಯದಿ ನಿನ್ನ ರೂಪವು
ವದನದಲಿ ತವ ನಾಮ ಮಂತ್ರವು
ಸದಯ ಪಾಲಿಸು ಬೇಡಿಕೊಂಡೆನು ಶೇಷಗಿರಿವಾಸ

**-ಶ್ರೀ ವೆಂಕಟೇಶ ಸ್ತವರಾಜದಿಂದ**



ಪ್ರಶ್ನೆ ಉಂಟಾಗಿರಬೇಕು. ಹಾಗೆಂದೇ ಮತ್ತೊಂದು ಕೃತಿಯಲ್ಲಿ ಇಲ್ಲಿನ ಜನ ಸಂದಣಿಯನ್ನು ಕುರಿತೇ ಹೇಳುತ್ತಾರೆ.

ನಿನ್ನ ನೋಡಲಿ ಬಂದೆ ನಿತ್ಯತೃಪ್ತ
ಅನ್ನವರಿಂದಲಿ ಎನಗೆ ಏನು ಪ್ರಯೋಜನ
ಮಿಕ್ಕ ಮಂದ ಜನಕ್ಕೆ ನಿನ್ನ ಭಕುತರ ಮೇಲೆ
ಭಕುತಿ ಪುಟ್ಟುವುದಕ್ಕೆ ನಾ ಹೇಳಿದ್ದು.

ಹೀಗೆಂದು ದೇವರನ್ನು ಸಮಾಧಾನ ಪಡಿಸಿದ ರಂತೆ. ಇಲ್ಲೆರಡು ಅಂಶಗಳು ಮುಖ್ಯವಾಗುತ್ತವೆ. ಒಂದು ತಿರುಮಲೆಯಲ್ಲಿ ಉತ್ಸವದಲ್ಲಿ ಸೇರುತ್ತಿದ್ದ ಜನದ ಅತಿಸಂದಣಿ, ಮತ್ತೊಂದು ವಿಜಯದಾಸರ ಲ್ಲಿನ ಲೋಕ ಸಂಗ್ರಹ ದೃಷ್ಟಿ - ಅದನ್ನವರು ಭಗವಂ ತನಿಗೇ ನಿವೇದಿಸಿಕೊಳ್ಳುತ್ತಾರೆ.

ಬ್ರಹ್ಮೋತ್ಸವದಲ್ಲಿ ಸ್ವಾಮಿಯವರಿಗೆ ರಥೋತ್ಸ ವವೂ ಇದ್ದು ಅದರ ವರ್ಣನೆಯನ್ನು ಈ ಕೀರ್ತ ನೆಯಲ್ಲಿ ಮಾಡಿರುವರು.

ಬೆಟ್ಟದೊಡೆಯನ ರಥ ಬರುತ್ತಿದೆ. ಅದರ ಮುಂದೆ ಭಕ್ತಜನ ಗೋವಿಂದ ನಾಮಘೋಷ ಮಾಡುತ್ತ ಬರುತ್ತಿದ್ದಾರೆ. ವಿಜಯದಾಸರು - ಭಕ್ತರು ಮುಂದೆ ಭಗವಂತ ಹಿಂದೆ -ಎಂಬುದನ್ನು ಬಹು ಚಮತ್ಕಾರಯುತವಾಗಿ ಸ್ವಾರಸ್ಯವಾಗಿ ವಿವರಿಸಿ ದ್ದಾರೆ.

ಭಕುತ ಜನ ಮುಂದೆ ನೀನವರ ಹಿಂದೆ
ಮುಕುತಿ ಕೈಗೊಳ್ಳದು ಗಯಾ ಗದಾಧರನೆ
ಕಟ್ಟೆರಡು ಬಿಗಿದು ನದಿ ಸೂಸಿ ಹರಿಯುತಿರೆ
ಕಟ್ಟಲೆಯಿಂದ ಹರಿಗೋಲು ಹಾಕಿ
ನೆಟ್ಟಗೆ ಆಚೆಗೀಚೆಗೆ ಪೋಗಿ ಬರುವಾಗ
ಹುಟ್ಟುಮುಂದಲ್ಲದೆ ಹರಿಗೋಲು ಮುಂದೇನೊ

ನದಿಯಲ್ಲಿನ ನಾವೆ ಮುಂದೆ ಹೋಗಬೇಕೆಂದರೆ ಅದರ ಹುಟ್ಟು ಮೊದಲು ಹೊರಬಂದು ನೀರನ್ನು ಹಿಂದೆ ಹಾಕಬೇಕು. ಇಲ್ಲದಿರೆ ಪಯಣವೆಂತು ಸಾಧ್ಯ?

ಕಹಳೆ ಹೆಗ್ಗಾಳೆ ದುಂದುಭಿ ಭೇರಿ ತಮಟೆ ನಿ
ಸ್ಸಾಳೆ ನಾನಾ ವಾದ್ಯ ಘೋಷಣಗಳು
ಸಾಲಾಗಿ ಬಳಿವಿಡಿದು ಸಂಭ್ರಮದಿ ಬರುವಾಗ
ಆಳು ಮುಂದಲ್ಲದೆ ಅರಸು ಮುಂದೇನೋ?

ಇಲ್ಲಿ ಎರಡಂಶ ಸ್ಪಷ್ಟವಾಗಿ ವೇದ್ಯವಾಗುವುದು. ಅರಸು ಹೊರಬರಬೇಕಾದರೆ ಮೊದಲು ಕಹಳೆ, ದುಂದುಭಿ, ಭೇರಿ, ತಮಟೆ ಕೊಂಬುಗಳು ಆತನ ಬರವನ್ನು ಬಿತ್ತರಿಸಬೇಕು. ಆಳು ಮೊದಲು ಬಂದ ರೇನೇ ಹಿಂದೆ ಅರಸು ಬರಲು ಸಾಧ್ಯ. ಇಲ್ಲಿ ನಮಗೆ ಪ್ರಸ್ತುತನಾದವನು ತಿರುಮಲೆಯ ಪ್ರಭು. ಇವನು ಜಗತ್ಪ್ರಭುವೂ ಹೌದು. ಇವನು ಹೊರಬರು ವಾಗ ಈತನ ಬರುವಿಕೆಯನ್ನು ಮಂಗಳವಾದ್ಯಗಳು ಮೊದಲು ಘೋಷಿಸಬೇಕು.

ಉತ್ಸವದ ವಾಹನವು
ಬೀದಿಯೊಳು ಮೆರೆಯುತಿರೆ
ಸತ್ಸಂಗತಿಗೆ ಹರಿದಾಸರಲ್ಲದೆ ಶ್ರೀ
ವತ್ಸಲ ಸಿರಿ ವಿಜಯ ವಿಠಲ ವೆಂಕಟಾಚಲ
ವತ್ಸ ಮುಂದಲ್ಲದೆ ಧೇನು ತಾ ಮುಂದೇನೋ

ಉತ್ಸವ ವಾಹನ ಮೆರವಣಿಗೆಯಲ್ಲಿ ಹೊರಬಂ ದಾಗ ಹರಿದಾಸರಿಗೆ ಉತ್ಸಾಹ ಉಕ್ಕಿ ಹರಿದು ಅವರು ಮೊದಲು ಮುಂದೆ ನಡೆಯುತ್ತಾರೆ. ದಾರಿ ಬಿಡಿಸಿಕೊಂಡು ದೇವರಿಗೆ ದಾರಿ ತೋರುತ್ತ. ಕರು ಮುಂದೆ ಹೊರಟಾಗ ಹಸು ಅದರ ಹಿಂದೆ ನಡೆ ಯುವಂತೆ ದೇವರು ಭಕ್ತರ ಹಿಂದೆ ನಡೆಯುವುದು ಸಹಜವೇ ಆಗಿದೆ ಎಂಬುದು ವಿಜಯದಾಸರ ಧ್ವನಿ.

ಮೊದಲ ಚರಣದಲ್ಲಿ ಜಡ, ಎರಡನೆಯದರಲ್ಲಿ ಜೀವ ಮೂರನೆಯ ಚರಣದಲ್ಲಿ ದೇವ ಸಂಬಂಧ ಉಪಮೆಗಳನ್ನು ನೀಡುತ್ತ - ಜಡ - ಜೀವ - ದೇವ - ಸೋಪಾನ ಪಂಕ್ತಿಯಾಗಿ ಹರಿದಿದೆ ಹಾಡು - ಕೊನೆಗೆ ವತ್ಸ - ಧೇನುಗಳಿಂದ ಜೀವದೇವ ಸಂಬಂ ಧವನ್ನೂ ಸೂಚಿಸುತ್ತದೆ.

ವಿಜಯದಾಸರ ಶಿಷ್ಯರಾದ ಗೋಪಾಲದಾಸರು ಬಹು ವಿನಯಸಂಪನ್ನರು. ಶ್ರೀನಿವಾಸನಲ್ಲಿ ಅವ ರಿಗೆ ಅನಂತ ಭಕ್ತಿ. ಅವರು ಆಗಾಗ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ನೋಡಿ ಆರಾಧಿಸಿದವರು. ಒಂದು ಸುಳಾದಿಯಲ್ಲಿ ಬ್ರಹ್ಮೋತ್ಸವದ ಬಗ್ಗೆ ಹೀಗೆ ವಿವರಿಸುತ್ತಾರೆ.

ನಡೆದು ಬಾರಯ್ಯ ನೀನು ವೆಂಕಟರಾಯ

ನಡೆದು ಬಾರಯ್ಯ ಭವ ಕಡಲಿಗೆ ಕುಂಭ ಸಂಭವ
ಸಡಗರದಿಂದ ಮೆಲ್ಲಡಿಯನಿಡುತ ಬೇಗ
ಎಡಬಲದಿಂದಲಿ ನಿನ್ನ ಮಡದೇರಿಂದೊಪ್ಪುತ
ತಡಮಾಡದೆ ಬಾ ಮೃಡಸಖಾ ವೆಂಕಟಾ
ವಿಜಯದಶಮಿ ಆಶ್ವೀಜಮಾಸ ಶುದ್ಧದಲ್ಲಿ
ನಿಜರಥಾರೂಢರಾಗಿ ಸುಜನರಿಂದೊಡಗೂಡಿ
ಗಜಸಿಂಹ ಮಯೂರ ಧ್ವಜ ಸಾರಂಗ
ಮಝು ಭಾಪುರೇ ಎನಲು ತ್ರಿಗಜವು ತಲೆದೂಗೆ
ಅಜನು ಸ್ತುತಿಯ ಮಾಡೆ
ಋಜು ಗಣಾಧಿಪ ಪಾಡೆ
ಗಜಮುಖನಯ್ಯನು ನಿಜಾನಂದದಲಾಡೆ

ಭುಜಗ ಶ್ರೇಷ್ಠನೆ ದ್ವಿಜರಾಜರು ಜಯವೆನ್ನೆ
ಕುಜನರೆದೆಯ ಮೆಟ್ಟಿ ರಜತಮ ಕಳೆಯುತ

ಮುಂದೆ ರಥೋತ್ಸವ ವರ್ಣನೆ ಪುರಾಣ ವರ್ಣ ನೆಯಾಗುತ್ತದೆ.

ಜಗನ್ನಾಥದಾಸರು ತತ್ವ ಸುವ್ವಾಲಿಯನ್ನು ಹರಿಕ ಥಾಮೃತಸಾರವನ್ನೂ ಬರೆದ ಹಿರಿಯರು. ಅವರ ಮೊದಲಿನ ಹೆಸರು ಶ್ರೀನಿವಾಸ. ಆಚಾರ್ಯರಾದ ಮೇಲೆ ವಿಜಯದಾಸರ ಅನುಗ್ರಹದಿಂದ ಹರಿದಾಸ ರಾದರು. ಅವರಿಗೆ ತಿರುಪತಿ ತಿಮ್ಮಪ್ಪ ಅಚ್ಚುಮೆಚ್ಚು. ಅವರ ಒಂದು ಪದ್ಯ ಬ್ರಹ್ಮೋತ್ಸವದಲ್ಲಿನ ರಥೋ ತ್ಸವವನ್ನು ಕುರಿತದ್ದು.

ರಥವ ಸೇರಿದ ರಥಿಕನಿವನ್ಯಾರೆ ಪೇಳಮ್ಮಯ್ಯ
ಕಥಿತಧ್ವಾತ ಸಂಸ್ತುತ ವಿತತಾನನವ
ಹಿತಕರ ದಿವಿಜರ ಪತಿ ಕಾಣಮ್ಮ
ಹಾಟಕ ರತ್ನ ಸುಪೀಠ ಮಧ್ಯ ಮಂಟಪದಿ
ಕೋಟಿ ರವಿಯ ಪ್ರಭಾಟೋಪದಿ ರಾಜಿಸುವ
ತಾಟಂಕಯುತ ವಧೂಟಿಯರಿಕ್ಕೆಲದಲಿ
ಆಟದಿ ಕುರುಜ ಮಹಾಟವಿ ಸವರಿ ಕಿ
ರೀಟಿಯ ಸಲಹಿದ ಖೇಟವಾಹನನೇ

ಗರುಡವಾಹನನಾದ ಆತ ರಥವನ್ನೇರಿದನೆಂದರೆ ಅಲ್ಲಿ ಭಾರತದ ಯುದ್ಧದ ನೆನಪಾಗುವುದು ಸಹ ಜವೇ. ಕಿರೀಟಿಯನ್ನು ಕಾಯ್ದದ್ದೇ ರಥವನೇರಿದ, ನಡೆಸಿದ ಶ್ರೀಕೃಷ್ಣನಲ್ಲವೇ. ಅವನಿಲ್ಲಿ ರಥವನ್ನೇರಿ ಬರಲು ಕಾರಣವೇನೆಂಬುದನ್ನು ದಾಸರು ಹೀಗೆ ಹೇಳುತ್ತಾರೆ.

ಭೂತಳ ಜನರಭಿಲಾಷೆಯ ಸಲಿಸಲು
ವಾತಾಶನ ಗಿರಿಗಿಳಿದ ಕಾಣಮ್ಮಾ

ಹೀಗೆ ಅಂದಿನಿಂದಲೂ ಬ್ರಹ್ಮೋತ್ಸವವನ್ನು ದರ್ಶಿಸಿ ಹಾಡಿದ ಹರಿದಾಸರಿಂದಾಗಿ ಈ ಉತ್ಸವದ ಘನತೆಯೂ ಹೆಚ್ಚಾಗಿ, ಭಕ್ತ ವೃಂದದ ಆನಂದವೂ ಅತಿಶಯವಾಗಿ ಮೆರೆದಿದೆ.

ಹರಿದಾಸರು ಸ್ವಾಮಿಯನ್ನು ಸಂದರ್ಶಿಸಿ ಹಾಡಿದ ಹಾಡುಗಳಲ್ಲಿ ಕೆಲವೇ ದೊರೆತಿವೆ ಎಂಬುದು ಹರಿ ದಾಸರುಗಳ ಪಾರಂಪರಿಕ ಕಥೆಗಳನ್ನೂ, ದೊರೆತಿ ರುವ ಅವರ ಕೃತಿಗಳನ್ನು ತಾಳೆ ಹಾಕಿ ನೋಡಿದಾಗ ಕಂಡುಬರುವ ಅಂಶ. ಈ ದಿಸೆಯಲ್ಲಿ ಸಂಶೋಧನೆ ಇನ್ನೂ ನಡೆಯಬೇಕಾದ ಅಗತ್ಯವಿದೆ.



# ನೂತನ ಧರ್ಮಕರ್ತರ ಮಂಡಳಿಯ ಪದವಿ ಸ್ವೀಕಾರ

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ನಿರ್ವಹಣೆಗಾಗಿ ಆಂಧ್ರಪ್ರದೇಶ ಸರ್ಕಾರ ಹೊಸ ಧರ್ಮಕರ್ತರ ಮಂಡಳಿಯನ್ನು ನೇಮಕಮಾಡಿದ್ದು ಈ ಧರ್ಮಕರ್ತರ ಮಂಡಳಿ ಆಗಸ್ಟ್ ಹತ್ತರಂದು ಬೆಳಗ್ಗೆ ತಿರುಮಲೆಯಲ್ಲಿ ಸ್ವಾಮಿಯ ಸನ್ನಿಧಿಯಲ್ಲಿ ತಮ್ಮ ಸೇವಾ ಪದವಿಯ ಪ್ರಮಾಣವಚನವನ್ನು ಸ್ವೀಕರಿಸಿದೆ.

ಗುರುವಾರ ಬೆಳಗ್ಗೆ 10-30 ರಿಂದ 12 ಗಂಟೆಯ ವರೆಗೆ ನಡೆದ ಪದವಿ ಪ್ರಮಾಣ ಸ್ವೀಕಾರ ಸಭೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್ ಅವರು ತಮ್ಮ ಧರ್ಮಪತ್ನಿ ಶ್ರೀಮತಿ ಲಕ್ಷ್ಮೀಪಾರ್ವತಿ ಅವರೊಡನೆ ಪಾಲುಗೊಂಡಿದ್ದರು. ಧರ್ಮಕರ್ತರ ಮಂಡಳಿಯ ಅಧ್ಯಕ್ಷರಾಗಿ ಶ್ರೀ ಪಿ. ವೆಂಕಟೇಶ್ವರ್ಲು ಅವರು ಮೊದಲಿಗೆ ಪ್ರಮಾಣ ವಚನವನ್ನು ಸ್ವೀಕರಿಸಿದರು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರು ಸದಸ್ಯರಿಗೆ ಪ್ರಮಾಣವಚನವನ್ನು ಬೋಧಿಸಿದರು. ಖ್ಯಾತ ಕನ್ನಡ ನಟ ಶ್ರೀ ರಾಜಕುಮಾರ್, ತಮಿಳು ನಟ ಶ್ರೀ ರಜನೀಕಾಂತ್, ತೆಲುಗು ನಟಿ ಶ್ರೀಮತಿ ಭಾನುಮತಿ ರಾಮಕೃಷ್ಣ, ಶ್ರೀ ದೇವನಾಥನ್, ಶ್ರೀ ಎಸ್. ಎಸ್. ಆರ್. ಕೋಟೀಶ್ವರರಾವ್, ಶ್ರೀ ಎ. ಮೋಹನ್ (ತಿರುಪತಿ ಎಂ.ಎಲ್.ಎ.) ಶ್ರೀರೆಡ್ಡಿ ಸತ್ಯನಾರಾಯಣ, ಶ್ರೀ ಎಂ. ರಾಜಯ್ಯ ಶ್ರೀ ಕೆ. ರಾಮಚಂದ್ರಾರೆಡ್ಡಿ, ಅವರುಗಳು ಪ್ರಮಾಣವಚನ ಸ್ವೀಕರಿಸಿದರು. ಮತ್ತೊಬ್ಬ ಧರ್ಮಕರ್ತರ ಮಂಡಳಿಯ ಸದಸ್ಯರಾದ ಶ್ರೀ ಶ್ರೀ ತ್ರಿದಂಡಿ ಚಿನ್ನ ರಾಮಾನುಜ ಜೀಯರ್ ಸ್ವಾಮಿಗಳು ಚಾತುರ್ಮಾಸ ವ್ರತದಲ್ಲಿರುವುದರಿಂದ ತಿರುಮಲೆಗೆ ಬರಲಾಗದೆ ಪ್ರಮಾಣ ಸ್ವೀಕಾರಕ್ಕೆ ಆಗಮಿಸಲಿಲ್ಲ. ಪದನಿಮಿತ್ತ ಸದಸ್ಯರಾಗಿ ಆಂಧ್ರಪ್ರದೇಶ ಮುಜರಾಯಿ ಇಲಾಖಾ ಕಮಿಷನರ್ ಶ್ರೀ ಸಿ. ಎಚ್. ವೆಂಕಟಪತಿರಾಜು ಹಾಗೂ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರುಗಳೂ ಪ್ರಮಾಣ ವಚನವನ್ನು ಸ್ವೀಕರಿಸಿದರು. ನಂತರ ಎಲ್ಲ ಸದಸ್ಯರಿಗೂ ಮುಖ್ಯ ಮಂತ್ರಿಗಳ ಮೂಲಕ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಪದ್ಮಾವತೀ ಅಮ್ಮನವರ ಜ್ಞಾಪಿಕೆಗಳನ್ನು ನೀಡಲಾಯಿತು. ನಂತರ ಮುಖ್ಯಮಂತ್ರಿ ಡಾ|| ಎನ್.ಟಿ. ರಾಮರಾವ್ ಅವರು ಬಂಗಾರದ ಬಾಗಿಲ ಬಳಿಯಲ್ಲಿ ಮಂಡಳಿಯನ್ನುದ್ದೇಶಿಸಿ ಮಾತನಾಡುತ್ತ ಭಕ್ತರ ಸೇವೆಯ ದೃಷ್ಟಿಯಿಂದ ಧರ್ಮಕರ್ತರ ಮಂಡಳಿಯನ್ನುಂಟುಮಾಡಿರುವುದಾಗಿಯೂ ಮಂಡಳಿಯ ಸದಸ್ಯರು ಯಾತ್ರಿಕ ಸೇವೆಯನ್ನೇ ದೃಷ್ಟಿಯಲ್ಲಿರಿಸಿಕೊಂಡು ಭಗವಂತನ ಕೃಪೆಗೆ ಪಾತ್ರರಾಗುವಂತೆ ಭಾಗವತ ಸೇವಾಮನೋಭಾವದಿಂದ ನಡೆದುಕೊಳ್ಳಬೇಕೆಂದೂ ಹಿತವನ್ನು ನುಡಿದರು. ಈ ಪ್ರಸಂಗವನ್ನು ಧ್ವನಿವರ್ಧಕದ ಮೂಲಕ ತಿರುಮಲೆಯ ಆಲಯದ ಹೊರಗೆ ನೆರೆದಿದ್ದ ಸಾವಿರಾರು ಮಂದಿ ಯಾತ್ರಿಕ ಭಕ್ತರೂ ಕೇಳುವಂತೆ ಏರ್ಪಾಡು ಮಾಡಲಾಗಿದ್ದಿತು. ಸಂಸ್ಕೃತ ಶ್ಲೋಕಗಳಿಂದ ವೇದಾಂತಮಯವಾಗಿದ್ದ ಈ ಉಪನ್ಯಾಸ ಭಕ್ತರು ಮೆಚ್ಚುವಂತೆ ಮೂಡಿಬಂದಿತು.



# ವಾರ್ತಾಲಹರಿ

ಪ್ರಮಾಣೋತ್ಸವ ಸ್ವೀಕಾರ ಸಮಾರಂಭದಲ್ಲಿ ಆಂಧ್ರಪ್ರದೇಶದ ಆರ್ಥಿಕ ಶಾಖಾಮಂತ್ರಿ ಶ್ರೀ ನಾರಾ ಚಂದ್ರಬಾಬುನಾಯುಡು, ಆರೋಗ್ಯಶಾಖಾಮಂತ್ರಿ ಶ್ರೀ ಮಾಧವರೆಡ್ಡಿ, ಪ್ರವಾಸೋದ್ಯಮ ಇಲಾಖಾ ಮಂತ್ರಿ ಶ್ರೀ ಎಂ. ನರಸಿಂಹುಲು, ಮುಜರಾಯಿ ಇಲಾಖಾ ಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ, ತಿ.ತಿ.ದೇ. ಮಾಜಿ ಅಧ್ಯಕ್ಷರು ಶ್ರೀ ದೇವಿನೇನಿ ಸೀತಾರಾಮಯ್ಯ ಚಿತ್ತೂರು ಜಿಲ್ಲೆಯ ಎಂ. ಎಲ್. ಎ. ಗಳು ಶ್ರೀ ಶ್ರೀನಾಥರೆಡ್ಡಿ, ಶ್ರೀ ಸಿ. ರಾಮಚಂದ್ರಾರೆಡ್ಡಿ, ಶ್ರೀ ಗೋಪಾಲಕೃಷ್ಣಾರೆಡ್ಡಿ, ಶ್ರೀಮತಿ ಲಕ್ಷ್ಮೀದೇವಮ್ಮ ಮೊದಲಾದವರು ಭಾಗವಹಿಸಿದ್ದರು.

ಪ್ರಮಾಣ ವಚನ ಸ್ವೀಕಾರೋತ್ಸವದ ಅಂಗವಾಗಿ ತಿರುಮಲೆಯಲ್ಲಿ ಅತಿಹೆಚ್ಚು ಮಂದಿ ಯಾತ್ರಿಕರು ಸೇರಿದ್ದರು. ಬೀದಿ ಬೀದಿಗಳನ್ನು ತಳಿರುತೋರಣಗಳಿಂದ ಅಲಂಕರಿಸಲಾಗಿದ್ದಿತು. ವಿಶೇಷ ರಕ್ಷಣಾ ವ್ಯವಸ್ಥೆಯೂ ಆಗಿದ್ದಿತು. ಜಿಲ್ಲಾ ಕಲೆಕ್ಟರ್ ಶ್ರೀ ಸುರೇಶ್‌ಚಂದಾ, ತಿರುಮಲೆ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ತಿರುಪತಿ ಜೆ.ಇ.ಓ. ಶ್ರೀ ಸತ್ಯನಾರಾಯಣ, ಆಲಯ ಡೆ.ಇ.ಓ. ಸ್ಪೆಷಲ್‌ಗ್ರೇಡ್ ಶ್ರೀ ವಾಸುದೇವನ್, ಉದ್ಯೋಗ ಸಂಘಗಳ ನಾಯಕರುಗಳು ಮತ್ತಿತರ ಅಧಿಕಾರಿಗಳು ಪಾಲುಗೊಂಡಿದ್ದರು.

## ಧರ್ಮಕರ್ತರ ಪ್ರಜಾಪರಿಚಯ

ತಿರುಮಲೆ - ತಿರುಪತಿ ದೇವಸ್ಥಾನಗಳ ಆಡಳಿತಕ್ಕಾಗಿ ಆಂಧ್ರಪ್ರದೇಶ ಸರ್ಕಾರ ನಿಯಮಿಸಿದ ಧರ್ಮಕರ್ತರ ಮಂಡಳಿಯ ಸದಸ್ಯರನ್ನು ಪ್ರಜೆಗಳಿಗೆ ಪರಿಚಯ ಮಾಡಿಕೊಡುವ ಸಮಾರಂಭ ತಿರುಪತಿಯ ಎಸ್.ವಿ. ವಿಶ್ವವಿದ್ಯಾಲಯದ ಮೈದಾನದಲ್ಲಿ ದಿನಾಂಕ 10-8-95 ರಂದು ಸಂಪನ್ನವಾಯಿತು.

ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರ ಅಧ್ಯಕ್ಷತೆಯಲ್ಲಿ ನೆರೆದ ಸಭೆಯಲ್ಲಿ ಮಂಡಳಿಯ ಸದಸ್ಯರನ್ನು ಸಭೆಗೆ ಪರಿಚಯ ಮಾಡಿಕೊಟ್ಟು ಸನ್ಮಾನಿಸಿದವರು ಆಂಧ್ರಪ್ರದೇಶದ ಮುಖ್ಯಮಂತ್ರಿ ಎನ್. ಟಿ. ರಾಮರಾವ್ ಅವರು.

ತಿರುಮಲೆಯ ಸ್ವಾಮಿ ಸನ್ನಿಧಿಯಲ್ಲಿ ಪದವಿ ಪ್ರಮಾಣವಚನ ಸ್ವೀಕರಿಸಿದ ನಂತರ ತಿರುಪತಿಯ ಬಸ್ ನಿಲ್ದಾಣದಿಂದ ಮೆರವಣಿಗೆಯಲ್ಲಿ ಮೈದಾನವನ್ನು ತಲುಪಿದ ಮುಖ್ಯಮಂತ್ರಿ ದಂಪತಿಗಳು, ಮಂತ್ರಿಗಳು, ಮಂಡಳಿಯ ಸದಸ್ಯರನ್ನು ಹಾದಿಯುದ್ದಕ್ಕೂ ಹೂಮಳೆಗರೆದು ಸ್ವಾಗತಿಸಲಾಯಿತು. ಸಭಾಸ್ಥಲದಲ್ಲಿ ಶ್ರೀಮತಿ ಶೋಭಾರಾಜು ಅವರು ಅನ್ನಮಾಚಾರ್ಯ ಕೃತಿಗಳ ಗಾನ ಕಚೇರಿಯನ್ನು ನಡೆಸಿಕೊಡುತ್ತ, ಭಗವದ್ಗೀತೆಯ ಶ್ಲೋಕಗಳಿಂದ ಪ್ರಾರ್ಥನೆಯನ್ನು ನಡೆಸಿಕೊಟ್ಟರು. ಶೃಂಗೇರಿ ಜಗ



ದ್ಗುರು ಶ್ರೀ ಶ್ರೀ ಭಾರತೀ ತೀರ್ಥಸ್ವಾಮಿಜಿ ಅವರ ಸಂದೇಶವನ್ನು ಪ್ರಮುಖ ಗಮಕಿ ಪಂಡಿತ ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿ ಅವರು ಓದಿದರು. ಮಂಡಳಿಯ ಸದಸ್ಯರಾಗಿ ಆಯ್ಕೆ ಆಗಿ, ಚಾತುರ್ಮಾಸ ವ್ರತದ ಪ್ರಯುಕ್ತ ತಿರುಮಲೆಗೆ ಆಗಮಿಸಲಾಗದ ಪರಿಸ್ಥಿತಿಯಲ್ಲಿದ್ದ ಶ್ರೀ ಶ್ರೀ ಚಿನ್ನಜೀಯರ್ ಸ್ವಾಮಿಗಳ ಸಂದೇಶವನ್ನೂ ಓದಲಾಯಿತು. ವೇದ ಪಂಡಿತರ ಮಂಗಳಾಶಾಸನವಾದಮೇಲೆ ಶ್ರೀ ಕ್ರಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿ ಅವರು ಮಂಡಳಿಯ ಸದಸ್ಯರ ಸಂಕ್ಷಿಪ್ತ ಪರಿಚಯ ನೀಡುತ್ತಿದ್ದಂತೆ ಮುಖ್ಯಮಂತ್ರಿಗಳು ಒಬ್ಬೊಬ್ಬರನ್ನೇ ಸತ್ಕರಿಸಿದರು.

ಧರ್ಮಕರ್ತರ ಮಂಡಳಿಯ ಅಧ್ಯಕ್ಷರು ಶ್ರೀ ಪಿ. ವೆಂಕಟೇಶ್ವರ್ಲು ಅವರು ಮಾತನಾಡುತ್ತ ತಾವು ಈ ಹಿಂದೆ ಧರ್ಮಕರ್ತರ ಮಂಡಳಿಯ ಸದಸ್ಯರಾಗಿದ್ದು ತಿ.ತಿ.ದೇ. ಆಡಳಿತ ಸಮಸ್ಯೆಗಳ ಬಗ್ಗೆ ಅಧ್ಯಯನ ಮಾಡಿರುವುದಾಗಿಯೂ, ರಾಮಕೃಷ್ಣಮಿಷನ್, ಕಂಚಿ ಪೀಠ, ಮೊದಲಾದ ಧಾರ್ಮಿಕ ಸಂಘ ಸಂಸ್ಥೆಗಳೊಡನೆ ಸಂಬಂಧ ವಿರುವುದಾಗಿಯೂ, ಈ ಹಿನ್ನೆಲೆಯಲ್ಲಿ ಯಾತ್ರಿಕ ಸೇವೆಯನ್ನು ಸಮರ್ಥವಾಗಿ ನಿರ್ವಹಿಸಲು ಪ್ರಯತ್ನಿಸುವುದಾಗಿಯೂ, ತಿರುಮಲೆಯ ಪಾವಿತ್ರ್ಯ, ಔನ್ನತ್ಯಗಳನ್ನು ಹೆಚ್ಚಿಸಿ ಯಾತ್ರಿಕ ಭಕ್ತರ ಅನುಕೂಲಗಳನ್ನು ಕಲ್ಪಿಸುವುದೇ ತಮ್ಮಗುರಿಯನ್ನಾಗಿ ಹೊಂದುವುದಾಗಿಯೂ ಭರವಸೆ ನೀಡಿದರು. ಮಂಡಳಿಯ ಸದಸ್ಯರಾದ ಶ್ರೀ ರಾಜಕುಮಾರ್, ಶ್ರೀ ರಜನೀಕಾಂತ್ ಅವರುಗಳೂ ತಿರುಮಲೆಯ ಯಾತ್ರಿಕಾವಸರಗಳನ್ನು ಪೂರೈಸುವಲ್ಲಿ ತಮ್ಮ ಕೈಂಕರ್ಯವನ್ನು ಪೂರ್ಣ ಮನದಿಂದ ಸಲ್ಲಿಸುವುದಾಗಿ ವಾಗ್ದಾನ ನೀಡಿದರು. ತಿರುಪತಿಯ ಎಂ.ಎಲ್.ಎ. ಮೊದಲಬಾರಿಗೆ ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಸದಸ್ಯರಾಗಿದ್ದು, ಎಂ. ಎಲ್. ಎ. ಶ್ರೀ ಮೋಹನ್ ಮಾತನಾಡುತ್ತ - ಸ್ಥಳದ ಅಭಿವೃದ್ಧಿಯಲ್ಲಿ ಸ್ಥಳೀಯ ಜನಪ್ರತಿನಿಧಿಗೆ ಅವಕಾಶವಿರಬೇಕೆಂದು ಭಾವಿಸಿದ ಮುಖ್ಯಮಂತ್ರಿಗಳ ದೂರದರ್ಶಿತ್ವವನ್ನು ಕೊಂಡಾಡುತ್ತ - ತಿರುಮಲೆ ತಿರುಪತಿಗಳಲ್ಲಿ ಯಾತ್ರಿಕರ ನಿತ್ಯ ಸಮಸ್ಯೆಗಳನ್ನು ದೂರ ಮಾಡುತ್ತ ಸ್ಥಳೀಯ ಸಮಸ್ಯೆಗಳನ್ನು ಪರಿಷ್ಕರಿಸಲು ತಮ್ಮೆಲ್ಲ ಶಕ್ತಿಯನ್ನೂ ವಿನಿಯೋಗಿಸುವೆವೆಂದು - ಭರವಸೆ ನೀಡಿದರು.



ಸಭೆಯಲ್ಲಿ ರಾಜ್ಯಸಭಾಸದಸ್ಯ ಶ್ರೀ ಮೋಹನಬಾಬು ಅವರು ಮೊದಲಿಗೆ ಕನ್ನಡದ ನಟ ಶ್ರೀ ರಾಜಕುಮಾರ್ ಅವರು ಕನ್ನಡದಲ್ಲಿಯೇ ಮಾತನಾಡುವರೆಂದೂ ಗಮನವಿಟ್ಟು ಕೇಳಬೇಕೆಂದೂ ವಿನಂತಿಸಿದರು. ಶ್ರೀ ರಾಜಕುಮಾರ್ ಅವರು ತಮ್ಮ ಕನ್ನಡದ ಕಿರು ಭಾಷಣದಲ್ಲಿ ತಮಗೆ ಸ್ವಾಮಿಯ ಸೇವೆ ಸಲ್ಲಿಸುವ ಭಾಗ್ಯವನ್ನು ಒದಗಿಸಿದ ಮುಖ್ಯಮಂತ್ರಿಯವರ ಹೃದಯ ವೈಶಾಲ್ಯವನ್ನು ಶ್ಲಾಘಿಸಿ, ಅವರ ನಿರೀಕ್ಷೆಯಂತೆ ತಾವು ಕೈಂಕರ್ಯಪರರಾಗಿ ದೀಕ್ಷಾಬದ್ಧರಾಗುವುದಾಗಿ ನುಡಿದರು. ಶ್ರೀ ರಜನೀಕಾಂತ್ ಅವರು ತೆಲುಗಿನಲ್ಲೂ, ನಂತರ ತಮಿಳಿನಲ್ಲೂ ಮಾತನಾಡಿದರು. ಆಂಧ್ರಪ್ರದೇಶದ ಆರ್ಥಿಕ ಶಾಖಾಮಂತ್ರಿ ಶ್ರೀ ಚಂದ್ರಬಾಬುನಾಯುಡು ಅವರು ತಿರುಮಲೆ - ತಿರುಪತಿಗಳನ್ನು ಪ್ರಥಮ ಧಾರ್ಮಿಕ ಕ್ಷೇತ್ರವನ್ನಾಗಿಸುವುದೇ ಅನ್ನಗಾರು ಅವರ (ಮುಖ್ಯಮಂತ್ರಿ ಡಾ|| ಎನ್. ಟಿ. ರಾಮರಾವ್ ಅವರನ್ನು ಆಂಧ್ರಪ್ರದೇಶದ ಜನತೆ ಅನ್ನಗಾರು ಎಂದೇ ಗುರುತ್ತಿಸುತ್ತದೆ - ಅಣ್ಣನವರು ಎಂದರ್ಥ) ಉದ್ದೇಶವೆಂದೂ, ಅದಕ್ಕಾಗಿಯೇ ಸೇವಾಪರರನ್ನು ಸ್ವಾರ್ಥವಿಲ್ಲದವರನ್ನು ಆರಿಸಿ ಧರ್ಮಕರ್ತರ ಮಂಡಳಿಯನ್ನುಂಟುಮಾಡಿದ್ದಾರೆಂದು ನುಡಿದರು. ಶ್ರೀಮತಿ ಲಕ್ಷ್ಮಿಪಾರ್ವತಿಯವರು ಮಾತನಾಡುತ್ತ ಸೊಗಸಾದ ಒಂದು ಕಥೆ ಹೇಳಿ ಮಾನವ ಕೈಕಾಲು ಕಣ್ಣು ಚೆನ್ನಾಗಿದ್ದಾಗಲೇ ಮನವನ್ನು ಸಮಾಜದತ್ತ ದೈವದತ್ತ ತಿರುಗಿಸಬೇಕೆಂದು ವಿವರಿಸಿದರು. ಆಂಧ್ರಪ್ರದೇಶದ ಉನ್ನತ ವಿದ್ಯಾಶಾಖಾ ಮಂತ್ರಿ ಶ್ರೀ ಗಾಲಿ ಮುದ್ದುಕೃಷ್ಣಮನಾಯುಡು ಅವರು ಮಾತನಾಡುತ್ತ ಈ ಧರ್ಮಕರ್ತರ ಮಂಡಳಿ ಆದರ್ಶಪ್ರಾಯವಾಗಿ ಕೆಲಸ ನಿರ್ವಹಿಸಿ ತಿರುಮಲೆಗೂ ಆಂಧ್ರದೇಶಕ್ಕೂ ಹೆಸರು ತರುವುದರಲ್ಲಿ ಸಂದೇಹವಿಲ್ಲವೆಂದರು.

ಮುಖ್ಯಮಂತ್ರಿ ಡಾ|| ಎನ್. ಟಿ. ರಾಮರಾವ್ ಅವರು ಸೌಹಾರ್ದ, ಶಾಂತಿಗಳನ್ನು ಹರಡುವಲ್ಲಿ ಧರ್ಮಕರ್ತರು ತಮ್ಮನ್ನು ತೊಡಗಿಸಿಕೊಂಡು ಯಾತ್ರಿಕರ ಕನಿಷ್ಠ ಸೌಕರ್ಯಗಳತ್ತ ಮೊದಲು ಗಮನ ಹರಿಸಬೇಕೆಂದರು. ತಿರುಪತಿಗೆ ಬಂದ - ಬರುವ ಯಾತ್ರಿಕರಿಗೆ ಬಾಯಾರಿಕೆಯನ್ನು ದೂರ ಮಾಡಲು ಮೊದಲು ನೀರು ಕೊಡುವ ಕೆಲಸ ಆಗ

ದೇಕಿದೆ, ಅದಕ್ಕಾಗಿ ತೆಲುಗು ಗಂಗೆಯನ್ನು ಹರಿಸುವ ಕೆಲಸವಾಗಬೇಕು - ಎಂದು ಕರೆನೀಡುತ್ತ, ಯಾತ್ರಿಕರಿಗೆ ಯಾವುದೇ ತೊಂದರೆಯೂ ಆಗದಂತೆ, ಅವರ ತಿರುಮಲೆಯ ಯಾತ್ರೆ ಒಂದು ಆಧ್ಯಾತ್ಮಿಕ ಅನುಭವವಾಗಿ, ಅವರು ಬಹುಕಾಲ ನೆನಪಿನಲ್ಲಿ ಉಳಿಸಿಕೊಳ್ಳುವಂತಹ ರೀತಿಯ ಸೇವೆ, ಸದುಪಾಯಗಳನ್ನು ಕಲ್ಪಿಸಬೇಕಾಗಿದೆ. ಸ್ವಾಮಿಯ ನಿತ್ಯಕೈಂಕರ್ಯದಲ್ಲಿ ಯಾವುದೇ ಲೋಪ ಬರದಂತೆ, ಭಾಗವತ ಸೇವೆ ಸಾಗಬೇಕಾಗಿದೆ. ಹೀಗಾಗಿ ಇಂತಹ ಸೇವಾ ಮನೋಭಾವದ ಗಣ್ಯರನ್ನು ಧರ್ಮಕರ್ತರ ಮಂಡಳಿಯಲ್ಲಿ ಸೇರಿಸಲಾಗಿದೆ ಎಂದು ವಿವರಿಸುತ್ತ, ಧರ್ಮಕರ್ತರ ಮಂಡಳಿ ಆದರ್ಶ ಮಾದರಿಯಾಗಿ ಕೆಲಸ ಮಾಡಲಿ ಎಂದು ಹಾರೈಸಿದರು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ನಿಮ್ಮಗಡ್ಡ ರಮೇಶ್‌ಕುಮಾರ್ ಅವರು ಸಭೆಯನ್ನು ವಂದಿಸಿದರು.



ಆಲಯದಲ್ಲಿ ಮುಖ್ಯಮಂತ್ರಿ ದಂಪತಿಗಳೊಡನೆ ಕಾರ್ಯನಿರ್ವಹಣಾಧಿಕಾರಿ.

## ತಿರುಮಲೆಯಲ್ಲಿ ಮುಖ್ಯಮಂತ್ರಿ

ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್ ಅವರು ಆಗಸ್ಟ್ 9 ನೇ ದಿನಾಂಕ ಮಧ್ಯಾಹ್ನ ತಿರುಮಲೆಗೆ ಆಗಮಿಸಿ ಸ್ವಾಮಿಯ ಸೇವೆಯಲ್ಲಿ ಪಾಲುಗೊಂಡರು.

ಅಂದು ಸಂಜೆ ಅವರ ಜೊತೆ ಸೇರಿದ ಅವರ ಧರ್ಮಪತ್ನಿ ಶ್ರೀಮತಿ ಲಕ್ಷ್ಮೀಪಾರ್ವತಿ ಅವರೊಡನೆ ಮುಖ್ಯಮಂತ್ರಿಗಳು ಗುರುವಾರ ಬೆಳಗ್ಗೆ ಸುಪ್ರಭಾತ ದರ್ಶನಕ್ಕೆ ಗುಡಿಗೆ ಆಗಮಿಸಿದರು. ಮಹಾದ್ವಾರದ ಬಳಿ ಮುಖ್ಯಮಂತ್ರಿ ದಂಪತಿಗಳನ್ನು, ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಸ್ಪೆಷಲ್ ಗ್ರೇಡ್ ಡೆ.ಇ.ಓ. ಶ್ರೀ ವಾಸುದೇವನ್ ಮೊದಲಾದವರು ಸ್ವಾಗತಿಸಿದರು.

ಪ್ರಜಾ ಪರಿಚಯ ಕಾರ್ಯಕ್ರಮಕ್ಕೆ ತಿರುಪತಿಗೆ ಬಂದ ಮುಖ್ಯ ಮಂತ್ರಿ ದಂಪತಿಗಳು ಈ ಕಾರ್ಯಕ್ರಮದಲ್ಲಿಯೇ ಪ್ರಾರಂಭದಲ್ಲಿ ರಿಮೋಟ್ ಕಂಟ್ರೋಲ್ ಮೂಲಕ ಎಸ್. ವಿ. ವಿಶ್ವವಿದ್ಯಾಲಯದ ಮಲ್ಟಿಪರ್ಪಸ್ ಇಂಡೋರ್ ಸ್ಟೇಡಿಯಂ, ಹಾಗೂ ಬಯೋ ಟೆಕ್ನಾಲಜಿ ಬಿಲ್ಡಿಂಗ್‌ಗಳಿಗೆ ಶಂಕುಸ್ಥಾಪನೆಯನ್ನು ನೆರವೇರಿಸಿ, ಕಾರ್ಯಕ್ರಮದ ನಂತರ ತಿರುಮಲೆಗೆ ಹಿಂದಿರುಗಿದರು.

ಶುಕ್ರವಾರ ಬೆಳಗ್ಗೆ ತಾವು ತಂಗಿದ್ದ ತಿರುಮಲೆಯ ಶ್ರೀ ಪದ್ಮಾವತೀ ಅತಿಥಿಗೃಹದ ಬಳಿ ರಾಮ, ಲಕ್ಷ್ಮಣ ಹೆಸರಿನ ಕ್ರೋಟನ್‌ಗಳನ್ನು ನೆಟ್ಟು, ತಿ. ತಿ. ದೇ. ಉದ್ಯಾನ ಇಲಾಖೆಯ ಪುಸ್ತಿಕೆಯನ್ನು ಬಿಡುಗಡೆ ಮಾಡಿದರು.

ತಿರುಮಲೆಯ ಸಪ್ತಗಿರಿ ಸತ್ರಗಳ ಭಾಗವಾಗಿ 1.25 ಕೋಟಿ ರೂ.ಗಳ ವೆಚ್ಚದಲ್ಲಿ ನಿರ್ಮಾಣವಾದ 'ನರ್ಮದಾ' ವಿಭಾಗವನ್ನು ಮುಖ್ಯಮಂತ್ರಿಗಳು ಉದ್ಘಾಟಿಸಿದರು. 65 ಕೊಠಡಿಗಳಲ್ಲಿ 390 ಮಂದಿಗೆ ವಸತಿ ಸೌಕರ್ಯ ಕಲ್ಪಿಸಬಹುದಾದ 'ನರ್ಮದಾ' ವಿಭಾಗದಲ್ಲಿ ಯಾತ್ರಿಕರಿಗೆ ವಸತಿ ಉಚಿತವಾಗಿ ನೀಡಲಾಗುತ್ತದೆ.

ನಂತರ ತಿರುಪತಿಯಲ್ಲಿ ಸ್ವಿಮ್ಸ್ ಆಡಳಿತ ಸಮಾವೇಶದಲ್ಲಿ ಪಾಲುಗೊಂಡ ಮುಖ್ಯಮಂತ್ರಿ ದಂಪತಿಗಳು ತಿರುಪತಿಯ ಎಸ್. ವಿ. ಜೂನಿಯರ್ ಕಾಲೇಜಿನ ನೂತನ ಭವನವನ್ನು ಉದ್ಘಾಟಿಸಿ ಹೈದರಾಬಾದಿಗೆ ತೆರಳಿದರು.




ನರ್ಮದಾ ವಿಭಾಗದ ಶಿಲಾಫಲಕದ ಬಳಿಯಲ್ಲಿ ಮುಖ್ಯಮಂತ್ರಿ ದಂಪತಿಗಳು.

## ಧರ್ಮಕರ್ತರ ಮಂಡಳಿಯ ತೀರ್ಮಾನಗಳು

ನೂತನ ಧರ್ಮಕರ್ತರ ಮಂಡಳಿ ಅಧಿಕಾರ ಪ್ರಮಾಣವಚನವನ್ನು ಸ್ವೀಕರಿಸಿದ ನಂತರ 10-8-95 ರಂದು ಮಧ್ಯಾಹ್ನ ಸಮಾವೇಶವಾಗಿ ಹಲವಾರು ನಿರ್ಣಯಗಳನ್ನು ಕೈಗೊಂಡಿದೆ. ಅವುಗಳ ವಿವರಗಳನ್ನು 12-8-95 ರಂದು ಕಾರ್ಯನಿರ್ಹಣಾಧಿಕಾರಿಯುವರು ಪತ್ರಿಕಾ ಪ್ರಕಟನೆಯಲ್ಲಿ ನೀಡಿದ್ದಾರೆ.

ತಿರುಪತಿಯಲ್ಲಿ ಕುಡಿಯುವ ನೀರಿನ ಬವಣೆಯನ್ನು ನಿವಾರಿಸಲು ಸರ್ಕಾರ ತಕ್ಕ ನೀರಿನ ಸೌಕರ್ಯವನ್ನು ತೋರಿಸುವುದಾದರೆ ಅದರ ವೆಚ್ಚವನ್ನು ಭರಿಸುವುದಾಗಿಯೂ, ಪ್ರತಿಯಾಗಿ ತಿರುಪತಿಯಲ್ಲಿನ ತಿ.ತಿ.ದೇ. ಆಸ್ತಿಗಳ ಮೇಲಿನ ಪುರಸಭಾಕಂದಾಯ ಮೊದಲಾದ ಕಂದಾಯಗಳು ಮುಕ್ತವಾಗಬೇಕೆಂದೂ ಸರ್ಕಾರವನ್ನು ಕೋರಲು ತೀರ್ಮಾನಿಸಲಾಯಿತು.

ಪರಿಪಾಲನಾ ಸೌಲಭ್ಯಕ್ಕಾಗಿ ಮೂರು ಉಪಸಮಿತಿಗಳನ್ನು ಹೊಂದಲು ತೀರ್ಮಾನಿಸಲಾಯಿತು. ಆರ್ಥಿಕ ಸಮಿತಿಯ ಅಧ್ಯಕ್ಷರಾಗಿ ಮಂಡಳಿಯ ಸದಸ್ಯ ಶ್ರೀ ಎಂ. ರಾಜಯ್ಯನವರನ್ನೂ, ಸದಸ್ಯರನ್ನಾಗಿ ಶ್ರೀ ಎ. ಮೋಹನ್. ಶ್ರೀ ಕೋಟೇಶ್ವರರಾವ್ ಅವರನ್ನು ನಿಯಮಿಸಲಾಯಿತು. ವರ್ಕ್ಸ್‌ಕಮಿಟಿ ಅಧ್ಯಕ್ಷರಾಗಿ ಶ್ರೀ ಡಿ. ದೇವನಾಥನ್ ಅವರನ್ನೂ, ಸದಸ್ಯರಾಗಿ ಶ್ರೀ ರೆಡ್ಡಿ ಸತ್ಯನಾರಾಯಣ, ಶ್ರೀ ರಜನೀಕಾಂತ್ ಅವರನ್ನೂ ನಿಯಮಿಸಲಾಯಿತು.

ತಿರುಮಲೆ ತಿರುಪತಿಯ ಕಾಲು ಹಾದಿಯಲ್ಲಿ 47 ಲಕ್ಷ ರೂಪಾಯಿಗಳ ನಿರ್ಮಾಣಗಳನ್ನುಂಟುಮಾಡಲು ಧರ್ಮಕರ್ತರ ಮಂಡಳಿ ತೀರ್ಮಾನಿಸಿದೆ. ಅದರ ಭಾಗವಾಗಿ ಲಕ್ಷ ರೂಪಾಯಿ ವೆಚ್ಚದಲ್ಲಿ ಮೊಣಕಾಲು ಮುರಿಯಲ್ಲಿ ರಾಮಾನುಜ ಸ್ಮಾರಕ ದ್ವಾರವನ್ನೂ, 20 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಅಲ್ಲಿಯೇ ಆಳ್ವಾರ್‌ಗಳ, ಹರಿದಾಸರ, ವಾಗ್ಗೇಯಕಾರರ ವಿಗ್ರಹಗಳನ್ನು ಏರ್ಪಾಡು ಮಾಡಬೇಕೆಂದೂ, ಅಲಿಪಿರಿಯಿಂದ ಗಾಳಿಗೋಪುರದ ವರೆಗೆ ಮಾರ್ಗಮಧ್ಯದಲ್ಲಿ 12 ಲಕ್ಷ ರೂ.ಗಳ ವೆಚ್ಚದಲ್ಲಿ ವ್ಯೂಪಾಯಿಂಟ್‌ಗಳನ್ನೂ, ಮೊಣಕಾಲು ಮುರಿಯ ಮೆಟ್ಟಿಲ ಬದಿಯ ರೈಲಿಂಗ್‌ಗಳನ್ನು 7 ಲಕ್ಷ ರೂ.ಗಳ ವೆಚ್ಚದಲ್ಲಿಯೂ ಉಂಟುಮಾಡಲು ತೀರ್ಮಾನಿಸಲಾಯಿತು.

ಪುರಾಣ ಶಿಕ್ಷಣ ಪಾಠಶಾಲೆಯಲ್ಲಿ ಶಿಕ್ಷಣ ಕಲಿಯುವ ವಿದ್ಯಾರ್ಥಿಗಳಲ್ಲಿ ಒಂದು ವರ್ಷದ ಅವಧಿಯ ಶಿಕ್ಷಣಕ್ಕೆ 600 ರೂ.ಗಳ ವಿದ್ಯಾರ್ಥಿವೇತನ ಹಾಗೂ ಎರಡು ವರ್ಷದ ಅವಧಿಯ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗೆ 750 ರೂ.ಗಳ ವಿದ್ಯಾರ್ಥಿವೇತನ ನೀಡಬೇಕೆಂದು ತೀರ್ಮಾನಿಸಲಾಯಿತು.




**Published on behalf of T. T. Devasthanams by N. S. Ramamurthy, M.A., Editor and Printed at T.T.D. Press by P. Mohan Rao, Manager, T.T.D. Press, Tirupati - 517 507**

